KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಸೆಪ್ಟೆಂಬರ್ ೨೫, ೨೦೦೮ (ಆಶ್ವಯುಜ ೩, ಶಕ ವರ್ಷ ೧೯೩೦) | ಸಂಚಿಕೆ ೩೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ಶ್ರೀ ಸೈಯದ್‌ಗೌಸ್ ಮೊಹಿಯುದ್ದೀನ್, ನಿವೃತ್ತ ತಹಶೀಲ್ದಾರ್, ಇವರ ಅನಧಿಕೃತ ಗೈರು ಹಾಜರಿಯ ಆಪಾದನೆಯ ವಿರುದ್ಧ ಶಿಸ್ತುಕ್ರಮದಿಂದ ಕೈಬಿಡುವ ಬಗ್ಗೆ ಆದೇಶ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2001, ದಿನಾಂಕ: 09–07–2001.
2) ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2001, ದಿನಾಂಕ: 22–11–2002.
3) ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2001, ದಿನಾಂಕ: 24–01–2003.
4) ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2001, ದಿನಾಂಕ: 06–10–2004.
5) ಸರ್ಕಾರದ ಕಾರಣ ಕೇಳುವ ನೋಟೀಸ್ ಸಂ: ಆರ್‌ಡಿ 36 ಎಡಿಇ 2001, ದಿನಾಂಕ: 06–10–2004.
6) ಸರ್ಕಾರದ ಪತ್ರ ಸಂ: ಆರ್‌ಡಿ 36 ಎಡಿಇ 2001, ದಿನಾಂಕ: 06–12–2005.
7) ನಿರ್ದೇಶಕರು, ವಾರ್ತಾ ಇಲಾಖೆ ಇವರ ಪತ್ರ ಸಂ: ವಾಇ: ವಾಪ್ರವಿ/ಸಿ/2005–06/5011, ದಿನಾಂಕ: 23–02–2006.
8) ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2001, ದಿನಾಂಕ: 20–07–2006.
9) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 25–09–2007.

**ಪ್ರಸ್ತಾವನೆ:**

ಶ್ರೀ ಸೈಯದ್‌ಗೌಸ್ ಮೊಹಿಯುದ್ದೀನ್, ತಹಶೀಲ್ದಾರ್ ಇವರನ್ನು ದಿನಾಂಕ: 11–02–1998ರ ಸರ್ಕಾರದ ಅಧಿಸೂಚನೆ ಸಂ: ಕಂಇ 50 ಎಟಿಎಸ್ 1997 ರಲ್ಲಿ ವಿಶೇಷ ತಹಶೀಲ್ದಾರರಾಗಿ ಕೃಷ್ಣ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇಲ್ಲಿಗೆ ನೇಮಕಾತಿ ಮಾಡಲಾಗಿದ್ದು, ಸದರಿ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗದೇ ನಂತರ ಇವರಿಗೆ ಬೇರೆಡೆಗೆ ವರ್ಗಾಯಿಸಿದ್ದರೂ ಸದರಿ ಸ್ಥಳಕ್ಕೆ ಹಾಜರಾಗದೆ, ಸರ್ಕಾರದ ಆದೇಶವನ್ನು ಪಾಲಿಸದೆ, ದಿನಾಂಕ: 11–02–1998 ರಿಂದ 27–01–2001ರವರೆಗೆ ಅನಧಿಕೃತ ಗೈರು ಹಾಜರಿಯ ಆಪಾದನೆಗೆ ಸರ್ಕಾರವು ಶ್ರೀ ಸೈಯದ್‌ಗೌಸ್ ಮೊಹಿಯುದ್ದೀನ್, ತಹಶೀಲ್ದಾರ್ ಇವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ: 09–07–2001ರಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಿಂದ ಅಮಾನತ್ತುಗೊಳಿಸಲಾಯಿತು. ನಂತರ, ಮೇಲೆ (2)ರಲ್ಲಿ ಓದಲಾದ ದಿನಾಂಕ: 22–11–2002ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಿಂದ

ಅಮಾನತ್ತುಗೊಳಿಸಿರುವುದನ್ನು ತೆರವುಗೊಳಿಸಿ, ಸೇವೆಗೆ ಪುನರ್ ಸ್ಥಾಪಿಸಿದೆ. ಹಾಗೂ ಅಮಾನತ್ತಿನ ಅವಧಿ 6 ತಿಂಗಳಿಗೂ ಮೇಲ್ಪಟ್ಟಿರುವುದರಿಂದ, ದಿನಾಂಕ: 24–01–2003ರ ಆದೇಶದಲ್ಲಿ ಇವರ ಜೀವನಾಂಶ ಭತ್ಯೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 (ಬಿ) (1)ರನ್ವಯ, ಶೇಕಡ 25ರಷ್ಟು ಹೆಚ್ಚಿಸಿ ಒಟ್ಟು ಶೇಕಡ 75 ರಷ್ಟು ಜೀವನಾಂಶ ಭತ್ಯೆಯನ್ನು ಮಂಜೂರು ಮಾಡಿ ಆದೇಶಿಸಿದೆ.

ಶ್ರೀ ಸೈಯದ್ ಗೌಸ್ ಮೊಹಿಯುದ್ದೀನ್, ಇವರು ದಿನಾಂಕ: 11–02–1998 ರಿಂದ 27–01–2001ರವರೆಗಿನ ಅನಧಿಕೃತ ಗೈರು ಹಾಜರಿಯ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 11 ಮತ್ತು 11(ಎ) ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ದೋಷಾರೋಪಣಾ ಪಟ್ಟಿಯನ್ನು ಅನುಬಂಧ 1 ರಿಂದ 4ರವರೆಗೆ ಜಾರಿಗೊಳಿಸಿ ಆಪಾದಿತರಿಂದ ರಕ್ಷಣಾ ಹೇಳಿಕೆಯನ್ನು ಕೋರಲಾಗಿತ್ತು. ಸದರಿ ದೋಷಾರೋಪಣಾ ಪಟ್ಟಿಯು ಜಾರಿಯಾಗದ ಕಾರಣ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 28ಎ (2) ರ ಅನ್ವಯ ಮೇಲೆ (6)ರಲ್ಲಿ ಓದಲಾದ ದಿನಾಂಕ: 06–12–2005ರ ಪತ್ರದಲ್ಲಿ ನಿರ್ದೇಶಕರು, ವಾರ್ತಾ ಇಲಾಖೆ, ಬೆಂಗಳೂರು ಇವರಿಗೆ ಎರಡು ಪ್ರಸಿದ್ಧ ದಿನಪತ್ರಿಕೆಗಳಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ಮೇಲೆ (7)ರಲ್ಲಿ ಓದಲಾದ ದಿನಾಂಕ: 23–02–2006ರ ಪತ್ರದಲ್ಲಿ ವಾರ್ತಾ ಇಲಾಖೆಯು ಪ್ರಕಟಣೆ ಪ್ರಕಟಿಸಿದೆ.

ಈ ಪ್ರಕರಣದಲ್ಲಿ ರಕ್ಷಣಾ ಹೇಳಿಕೆಯು ಬಾರದೇ ಇದ್ದರಿಂದ, ಏಕಪಕ್ಷೀಯವಾಗಿ ನಿರ್ಧರಿಸಿ ಮೇಲೆ (8)ರಲ್ಲಿ ಓದಲಾದ ದಿನಾಂಕ: 20–07–2006ರ ಆದೇಶದಲ್ಲಿ ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾ ಪ್ರಾಧಿಕಾರಿಗಳನ್ನಾಗಿ ಮತ್ತು ಬೆಂಗಳೂರು ನಗರ ಜಿಲ್ಲೆಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಕೋರಲಾಯಿತು. ವಿಚಾರಣಾ ಪ್ರಾಧಿಕಾರಿಗಳು ಮೇಲೆ (9)ರಲ್ಲಿ ಓದಲಾದ ದಿನಾಂಕ: 25–09–2007ರಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ಸಂದರ್ಭದಲ್ಲಿ ಒದಗಿಸಲಾದ ದಾಖಲಾತಿಯಲ್ಲಿ ಅಂದಿನ ಕಂದಾಯ ಮಂತ್ರಿಗಳು ಈ ಪ್ರಕರಣದ ಇತಿಹಾಸವನ್ನು ಸ್ಪಷ್ಟವಾಗಿ ಪ್ರತಿ ಹಂತವನ್ನು ಒಳಗೊಂಡಂತೆ, ಕಾಲಕಾಲಕ್ಕೆ ಘಟಿಸಿದ ಸಂಗತಿಗಳನ್ನು ಉಲ್ಲೇಖಿಸಿ ತೀರ್ಪು ನೀಡಿರುವುದನ್ನು ಗಮನಿಸಿದಾಗ, ಆಪಾದಿತರ ವಿರುದ್ಧ ಯಾವುದೇ ಶಿಸ್ತು ಕ್ರಮ ಅನಾವಶ್ಯಕವಾಗಿರುತ್ತದೆಂದು ಪರಿಗಣಿಸಿ ಮುಂದಿನ ಎಲ್ಲ ನಡವಳಿಗಳನ್ನು ಕೈಬಿಡಲು ಆದೇಶಿಸಿರುವುದಾಗಿ ವಿಚಾರಣಾ ವರದಿಯಲ್ಲಿ ತಿಳಿಸುತ್ತಾ, ಕಂದಾಯ ಮಂತ್ರಿಗಳಿಗೆ ಅಂತಹ ಆದೇಶ ಮಾಡಲು ಅಧಿಕಾರಿವಿಲ್ಲ ಎಂದು ಯಾರ ವಾದವೂ ಅಲ್ಲ. ಅದೇ ರೀತಿಯಾಗಿ ಕಂದಾಯ ಮಂತ್ರಿಗಳ ಆದೇಶದ ವಿರುದ್ಧ ಮುಖ್ಯ ಕಾರ್ಯದರ್ಶಿಗಳಾಗಲೀ, ಅಪೀಲು ಅಧಿಕಾರಿಗಳನ್ನು ಹೊಂದಿರುವ ಪ್ರಾಧಿಕಾರಗಳೆಂಬುದು ಯಾರ ವಾದವೂ ಅಲ್ಲ. ಕಾರಣ, ಕಂದಾಯ ಮಂತ್ರಿಗಳ ಆದೇಶ ಸಕ್ಷಮ ಅಧಿಕಾರಿಯವರು ಮಾಡಿದ್ದು ಆಗಿದ್ದು ಅದನ್ನು ಮೀರಿ ಅದಕ್ಕೆ ವಿರುದ್ಧ ನಿರ್ಣಯ ನೀಡಲು ಇಲಾಖಾ ವಿಚಾರಣಾಧಿಕಾರಿಗಳಿಗೆ ಅಧಿಕಾರ ವ್ಯಾಪ್ತಿ ಇಲ್ಲ. ಅದಕ್ಕೆಲ್ಲಕ್ಕಿಂತ ಸ್ಪಷ್ಟವಾಗಿ ಘಟನಾವಳಿಗಳನ್ನು ವಿವರಿಸುತ್ತಾ, ತಮ್ಮ ನಿರ್ಣಯಕ್ಕೆ ಒಪ್ಪಲಾದ ಮತ್ತು ದಾಖಲಾತಿಗಳ ಆಧಾರವನ್ನು ಪಡೆದ ನಿರ್ಣಯವು ಯಾವ ರೀತಿಯಲ್ಲಿ ಈ 4 ಆಪಾದನೆಗಳನ್ನು ಊರ್ಜಿತವಾದವುಗಳು ಅಲ್ಲ ಎಂದು ಮತ್ತು ಅವುಗಳನ್ನು ಕಾನೂನು ಅಗತ್ಯಪಡಿಸಿದ ಕೊನೆಯ ಪಕ್ಷ ಸಂಗತಿಗಳ ಸಂಭಾವ್ಯತೆಯ ಸಿದ್ಧಾಂತದ ಹಿನ್ನಲೆಯಲ್ಲಾದರೂ ರುಜುವಾತುಪಡಿಸಿಲ್ಲವೆಂದು ನಿರ್ಣಯಿಸಿರುತ್ತಾರೆ.

ವಿಚಾರಣಾ ಪ್ರಾಧಿಕಾರಿಗಳ ವಿಚಾರಣಾ ವರದಿಯನ್ನು ಪರಿಶೀಲಿಸಿ, ಶ್ರೀ ಸೈಯದ್ ಗೌಸ್ ಮೊಹಿಯುದ್ದೀನ್, ನಿವೃತ್ತ ತಹಶೀಲ್ದಾರ್ ಇವರಿಗೆ ಸರ್ಕಾರದ ಅಧಿಸೂಚನೆ ಸಂ: ಕಂಇ 37 ಎಎಸ್‌ಜಿ 97, ದಿನಾಂಕ: 11–10–1999ರಲ್ಲಿ ಬಾಗಲಕೋಟೆಗೆ ಆದ ವರ್ಗಾವಣೆಯನ್ನು ರದ್ದುಪಡಿಸಿ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ವರ್ಗಾಯಿಸಲಾಗಿದೆ. ಆದರೆ, ಅಧಿಸೂಚನೆ ಸಂ: ನಆಇ 110 ಎಂಎಸ್‌ಪಿ 99, ದಿನಾಂಕ: 31–01–2000ರಲ್ಲಿ ಇವರ ಸೇವೆಯು ಜಲಮಂಡಳಿಗೆ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಗೆ ಹಿಂದಿರುಗಿಸಲಾಗಿದೆ. ನಗರಾಭಿವೃದ್ಧಿ ಇಲಾಖೆಯು ಅಧಿಸೂಚನೆ ಸಂ: ನಇ 19 ಬೆಂಆಸೇ 2003, ದಿನಾಂಕ: 07–03–2003ರಲ್ಲಿ ಶ್ರೀ ಸೈಯದ್ ಗೌಸ್ ಮೊಹಿಯುದ್ದೀನ ತಹಶೀಲ್ದಾರ್ ಇವರು ದಿನಾಂಕ: 07–10–1997 ರಿಂದ 07–11–1997ರ ವರೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಮರು ನೇಮಕಾತಿಗಾಗಿ ಕಾಯ್ದ ಅವಧಿ ತದನಂತರ, ದಿನಾಂಕ: 11–10–1999 ರಿಂದ 31–01–2000ರವರೆಗೆ ಬೆಂಗಳೂರು ನಗರ ಜಲಮಂಡಳಿಗೆ ಮರು ನೇಮಕಾತಿಗಾಗಿ ಕಾಯ್ದ ಅವಧಿಯನ್ನು ಕೆ.ಸಿ.ಎಸ್.ಆರ್ ನಿಯಮ 8(15)(ಎಫ್)ರನ್ವಯ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿ ಆದೇಶ ಹೊರಡಿಸಲಾಗಿದೆ. ಹೀಗಿದ್ದಾಗ ಸದರಿ ಅಧಿಕಾರಿಯು ವರ್ಗಾವಣೆ ಆದ ಸ್ಥಳಕ್ಕೆ ವರದಿ ಮಾಡಿಕೊಳ್ಳಲಿಲ್ಲವೆಂಬ ವಾದವು ಸಮಂಜಸವಲ್ಲ. ಅಲ್ಲದೇ ಈ ಅಧಿಕಾರಿಯು ದಿನಾಂಕ: 31–05–2004ರಂದು ನಿವೃತ್ತರಾಗಿರುತ್ತಾರೆ. ಮೇಲಾಗಿ ಈ ಆರೋಪಗಳಲ್ಲಿ ಸರ್ಕಾರಕ್ಕೆ ಯಾವುದೇ ನಷ್ಟ ಉಂಟಾಗಿಲ್ಲವೆಂದು ನಿರ್ಧರಿಸಿರುವುದರಿಂದ ಇವರು ನಿವೃತ್ತಿ ತರುವಾಯ ತಡವಾಗಿ ಪಾವತಿಸುವ ನಿವೃತ್ತಿ ಉಪದಾನಗಳಿಗೆ ಯಾವುದೇ ಬಡ್ಡಿಯನ್ನು ನೀಡಬಾರದೆಂಬ

ಷರತ್ತಿಗೊಳಪಟ್ಟು, ವಿಚಾರಣಾ ಪ್ರಾಧಿಕಾರಿಗಳ ವಿಚಾರಣಾ ವರದಿಯಂತೆ, ಈ ಆರೋಪಗಳಿಂದ ದೋಷಮುಕ್ತಗೊಳಿಸಲು ನಿರ್ಧರಿಸಿ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2001, ಬೆಂಗಳೂರು, ದಿನಾಂಕ: 23ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಶ್ರೀ ಸೈಯದ್ ಗೌಸ್ ಮೊಹಿಯುದ್ದೀನ್, ನಿವೃತ್ತ ತಹಶೀಲ್ದಾರ್ ಇವರಿಗೆ ಸರ್ಕಾರದ ನೋಟೀಸ್ ಸಂ: ಕಂಇ 36 ಎಡಿಇ 2001, ದಿನಾಂಕ: 06–10–2004ರಲ್ಲಿ ಪ್ರಸ್ತಾಪಿಸಲಾದ ಆಪಾದನೆಯಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1102

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಆರ್. ಕಾಂತೇಶ್ (ವಯೋ ನಿವೃತ್ತರು) ಹಿಂದಿನ ತಹಶೀಲ್ದಾರ್, ನಾಡಕಛೇರಿ, ಹಡಗಲಿ ತಾಲ್ಲೂಕು ಮತ್ತು ಶ್ರೀ ಇಜಾಜ್‌ಬೇಗ್, ಉಪ ತಹಶೀಲ್ದಾರ್, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರುಗಳ ವಿರುದ್ಧದ ಆಪಾದನೆಗೆ ಶಿಸ್ತು ಕ್ರಮ ಕೈಬಿಡುವ ಬಗ್ಗೆ ಆದೇಶ.

**ಓದಲಾಗಿದೆ:**

1) ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪ್ರಸ್ತಾವನೆ ಸಂ: ಕಂಪ್ಲೆಂಟ್: ಉಪಲೋಕ್: ಬಿಜಿಎಂ: 125: 1999–200, ಡಿಆರ್‌ಇ–2 ದಿನಾಂಕ: 03–04–2002.
2) ಸರ್ಕಾರದ ಆದೇಶ ಸಂ: ಆರ್‌ಡಿ 20 ಎಡಿಇ 2002 (1), ದಿನಾಂಕ: 05–10–2002.
3) ಸರ್ಕಾರದ ಆದೇಶ ಸಂ: ಆರ್‌ಡಿ 20 ಎಡಿಇ 2002, ದಿನಾಂಕ: 15–02–2003.
4) ಮಾನ್ಯ ಉಪಲೋಕಾಯುಕ್ತ, ಕರ್ನಾಟಕ, ಬೆಂಗಳೂರು ಇವರ ವಿಚಾರಣಾ ವರದಿ ಸಂ: ಎಲ್‌ಓಕೆ: ಎಆರ್‌ಇ:4: ಇಎನ್‌ಕ್ಯೂ: 12: 2004–05, ದಿನಾಂಕ: 17–12–2007.

**ಪ್ರಸ್ತಾವನೆ:**

ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 03–04–2002ರ ಪ್ರಸ್ತಾವನೆಯಲ್ಲಿ ಫಿರ್ಯಾದುದಾರರಾದ ಶ್ರೀ ಗೋವಿಂದ. ಬಿ. ರೋಣ, ಮಾಳಮಡ್ಡಿ, ಧಾರವಾಡ ಇವರು ಮಾನ್ಯ ಉಪಲೋಕಾಯುಕ್ತರವರಿಗೆ ಸಲ್ಲಿಸಿದ ದೂರಿನಲ್ಲಿ ಇವರ ಲಾರಿ ಸಂ: ಎಂಇಖ 4856ನ್ನು ಜಪ್ತಿ ಮಾಡಿ ನ್ಯಾಯಾಲಯಕ್ಕೆ ಹಾಜರು ಪಡಿಸಿ ನಂತರ ನ್ಯಾಯಾಲಯದಿಂದ ಸ್ವಾಧೀನ ಪಡೆದು, ಲಾರಿಯಲ್ಲಿದ್ದ ಮರಳನ್ನು ಹರಾಜು ಮಾಡಿದ್ದಕ್ಕೆ ಹಾಗೂ ಈ ಲಾರಿಯು ರಹದಾರಿ ಹೊಂದಿದ್ದರೂ ಸಹ ಅನಗತ್ಯವಾಗಿ ತೊಂದರೆ ನೀಡಿ, ಕರ್ತವ್ಯ ನಿರ್ಲಕ್ಷತೆ ತೋರಿದ ಕಾರಣ ಮಾನ್ಯ ಉಪಲೋಕಾಯುಕ್ತ, ಇವರು ತನಿಖಾ ವರದಿಯನ್ನು ಕಳುಹಿಸಿ, ಶ್ರೀ ಕಾಂತೇಶ್, (ನಿವೃತ್ತರು) ಹಿಂದಿನ ತಹಶೀಲ್ದಾರ್, ನಾಡಕಛೇರಿ ಹಡಗಲಿ ತಾಲ್ಲೂಕು ಹಾಗೂ ಶ್ರೀ ಇಜಾಜ್‌ಬೇಗ್, ಉಪತಹಶೀಲ್ದಾರ್, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರುಗಳ ವಿರುದ್ಧ ಕರ್ನಾಟಕ ಲೋಕಾಯುಕ್ತ, ಕಾಯಿದೆ ಕಲಂ 12(3)ರನ್ವಯ ಶಿಸ್ತು ಕ್ರಮ ಕೈಗೊಳ್ಳಲು ಸಕ್ಷಮ ಪ್ರಾಧಿಕಾರವು ತಿಳಿಸುವಂತೆ ಪ್ರಸ್ತಾಪಿಸಿರುತ್ತಾರೆ.

ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಮೇಲೆ (2)ರಲ್ಲಿ ಓದಲಾದ ದಿನಾಂಕ: 05–10–2007ರ ಆದೇಶದಲ್ಲಿ ಶ್ರೀ ಆರ್. ಕಾಂತೇಶ್, ಹಿಂದಿನ ತಹಶೀಲ್ದಾರ್, ನಾಡಕಛೇರಿ, ಹಡಗಲಿ ತಾಲ್ಲೂಕು ಇವರು ಸೇವೆಯಿಂದ ದಿನಾಂಕ: 30–4–2000 ರಂದು ವಯೋನಿವೃತ್ತಿ ಹೊಂದಿದ್ದರಿಂದ ಕೆ.ಸಿ.ಎಸ್.ಆರ್. ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆ ನಡೆಸಲು ಆದೇಶಿಸಿತ್ತು. ಹಾಗೂ ಮೇಲೆ (3)ರಲ್ಲಿ ಓದಲಾದ ದಿನಾಂಕ: 15–2–2007ರ ಆದೇಶದಲ್ಲಿ ಶ್ರೀ ಆರ್. ಕಾಂತೇಶ್ (ನಿವೃತ್ತರು), ಹಿಂದಿನ ತಹಶೀಲ್ದಾರ್, ನಾಡಕಛೇರಿ, ಹಡಗಲಿ ತಾಲ್ಲೂಕು ಮತ್ತು ಶ್ರೀ ಇಜಾಜ್‌ಬೇಗ್, ಹಾಲಿ ಉಪತಹಶೀಲ್ದಾರ್, ಹಡಗಲಿ, ಬಳ್ಳಾರಿ ಜಿಲ್ಲೆ ಇವರುಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 14(ಎ) ಮತ್ತು 11 ಮತ್ತು 11(ಎ)ರನ್ವಯ ಜಂಟಿ ಇಲಾಖಾ ವಿಚಾರಣೆ ಜರುಗಿಸಿ ವರದಿಯನ್ನು ನೀಡಲು ಪ್ರಕರಣವನ್ನು ಮಾನ್ಯ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಲಾಗಿತ್ತು.

ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರು ಮೇಲೆ (4)ರಲ್ಲಿ ಓದಲಾದ ದಿನಾಂಕ: 17–12–2007ರ ಅ.ಸ.ಪತ್ರದಲ್ಲಿ ಅಪರ ನಿಬಂಧಕರು, ವಿಚಾರಣೆ (4), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಂದ ಇಲಾಖಾ ವಿಚಾರಣೆ ಜರುಗಿಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಮೊದಲನೆ ಆಪಾದಿತರಾದ ಶ್ರೀ ಆರ್. ಕಾಂತೇಶ್, ಇವರು ಸೇವೆಯಿಂದ ವಯೋ ನಿವೃತ್ತರಾಗಿದ್ದು, ಸದರಿಯವರಿಗೆ ಅವರ ವಿರುದ್ಧ

ಕಾನೂನಿನಡಿ ನಿಗದಿಗೊಳಿಸಿದ ಅವಧಿ ಮೀರಿ ಅವರು ನಿವೃತ್ತಿಯ ನಂತರ ವಿಚಾರಣೆ ಪ್ರಾರಂಭಿಸಿದ್ದರಿಂದ ಈ ಆಪಾದನೆಗೆ ದೋಷಾರೋಪಣೆಯು ಜಾರಿಗೊಂಡ ಅವಧಿಗೆ ಕೆ.ಸಿ.ಎಸ್.ಆರ್ ನಿಯಮ 214(2) (ಬಿ) (ii) ರನ್ವಯ ಕ್ರಮ ವಹಿಸಲು ಬರುವುದಿಲ್ಲವಾದ್ದರಿಂದ ಹಾಗೂ ಎರಡನೇ ಆಪಾದಿತರಾದ ಶ್ರೀ ಇಜಾಜ್‌ಬೇಗ್, ಉಪತಹಶೀಲ್ದಾರ್ ಇವರು ತಹಶೀಲ್ದಾರ್ ಇವರ ಮಾರ್ಗದರ್ಶನದಂತೆ, ತಮ್ಮ ಕರ್ತವ್ಯ ನಿರ್ವಹಿಸಿರುವುದರಿಂದ ಹಾಗೂ ತಹಶೀಲ್ದಾರರು ಪೋಲೀಸಿನವರಿಗೆ ನೀಡಿದ ದೂರನ್ನು ಹಿಂದಕ್ಕೆ ಪಡೆಯುವ ಅಥವಾ ಲಾರಿಯನ್ನು ಬಿಡುಗಡೆ ಮಾಡುವ ಅಥವಾ ದೂರನ್ನು ಹಿಂದಕ್ಕೆ ಪಡೆಯುವ ಅಧಿಕಾರ ಇಲ್ಲವಾದ್ದರಿಂದ ಯಾವುದೇ ದುರ್ನಡತೆ ಎಸಗಿಲ್ಲವೆಂದು ಅಥವಾ ಕರ್ತವ್ಯ ಲೋಪವಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ಆದ್ದರಿಂದ ಈ ಆಪಾದನೆಯಿಂದ ಆಪಾದಿತರುಗಳಾದ ಶ್ರೀ ಆರ್. ಕಾಂತೇಶ್ (ನಿವೃತ್ತ) ಹಿಂದಿನ ತಹಶೀಲ್ದಾರ್, ನಾಡಕಛೇರಿ ಹಡಗಲಿ ಮತ್ತು ಶ್ರೀ ಇಜಾಜ್‌ಬೇಗ್, ಹಿಂದಿನ ಉಪತಹಶೀಲ್ದಾರ್, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರುಗಳನ್ನು ದೋಷಮುಕ್ತಗೊಳಿಸುವಂತೆ ವರದಿ ನೀಡಿರುತ್ತಾರೆ.

ಸರ್ಕಾರವು ಕರ್ನಾಟಕ ಲೋಕಾಯುಕ್ತದ ಅಪರ ನಿಬಂಧಕರು ವಿಚಾರಣೆ (4) ಇವರ ಇಲಾಖಾ ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಇಲಾಖಾ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಆರ್. ಕಾಂತೇಶ್, ಹಿಂದಿನ ತಹಶೀಲ್ದಾರ್, ನಾಡಕಚೇರಿ, ಹಡಗಲಿ ತಾಲ್ಲೂಕು, ಮತ್ತು ಶ್ರೀ ಇಜಾಜ್ ಬೇಗ್, ಹಿಂದಿನ ಉಪತಹಶೀಲ್ದಾರ್ ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರುಗಳನ್ನು ಈ ಆಪಾದನೆಯಿಂದ ಕೈಬಿಟ್ಟು ದೋಷಮುಕ್ತಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 20 ಎಡಿಇ 2002, ಬೆಂಗಳೂರು, ದಿನಾಂಕ: 10ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಆರ್. ಕಾಂತೇಶ್ (ಪ್ರಸ್ತುತ ವಯೋ ನಿವೃತ್ತರು), ಹಿಂದಿನ ತಹಶೀಲ್ದಾರ್, ನಾಡಕಛೇರಿ ಹಡಗಲಿ ತಾಲ್ಲೂಕು ಹಾಲಿ ನಿವೃತ್ತರು ಮತ್ತು ಶ್ರೀ ಇಜಾಜ್‌ಬೇಗ್, ಹಿಂದಿನ ಉಪತಹಶೀಲ್ದಾರ್, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರುಗಳನ್ನು ಸರ್ಕಾರವು ಈ ಆಪಾದನೆಯಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1066

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಸಿ.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ಲಿಂಗಸಗೂರು, ಪ್ರಸ್ತುತ ನಿವೃತ್ತ ಇವರ ವಿರುದ್ಧ ಇಲಾಖಾ ವಿಚಾರಣೆ – ಆರೋಪಗಳಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:**

1) ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ, ರಾಯಚೂರು ಇವರ ಪತ್ರ ಸಂ: ಕಂದಾಯ:ಸಿಸಿಎ: 19: 2002-03, ದಿನಾಂಕ: 01-02-2003.
2) ದಿನಾಂಕ: 08-10-2003 ರ ತಿಳುವಳಿಕೆ ಪತ್ರ ಸಂ: ಕಂಇ 14 ಎಡಿಇ 2003.
3) ಶ್ರೀ ಸಿ.ಎಂ. ಹಿರೇಮಠ, ರವರ ದಿನಾಂಕ: 18-10-2003ರ ಲಿಖಿತ ಸಮಜಾಯಿಷಿ.
4) ಸರ್ಕಾರದ ಆದೇಶ ಸಂ: ಆರ್‌ಡಿ 14 ಎಡಿಇ 2003, ದಿನಾಂಕ: 07-05-2004.
5) ವಿಚಾರಣಾಧಿಕಾರಿಗಳ ವರದಿ ದಿನಾಂಕ: 13-12-2004.

**ಪ್ರಸ್ತಾವನೆ:**

ಶ್ರೀ ಸಿ.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ಲಿಂಗಸಗೂರು ತಾಲ್ಲೂಕು ಇವರು ಜಾತಿ ಪ್ರಮಾಣ ಪತ್ರ ನೀಡುವಲ್ಲಿ ಶ್ರೀ ಬಸವರಾಜು ತಂದೆ ಹನುಮಂತರಾಜು, ಈಚನಾಳ ಗ್ರಾಮ, ರಾಯಚೂರು ಜಿಲ್ಲೆ ಎಂಬುವವರಿಗೆ "111-ಎ" ರಡಿಯಲ್ಲಿ ನೀಡಬೇಕಾಗಿದ್ದು, ಜಾತಿ ಪ್ರಮಾಣ ಪತ್ರದ ಮೇಲೆ ತಮ್ಮ ಕೈಬರಹದಿಂದ "111-ಬಿ" ಎಂದು ತಿದ್ದುಪಡಿ ಮಾಡಿ ಕರ್ತವ್ಯ ಲೋಪ ಎಸಗಿರುತ್ತಾರೆಂದು, ಇನ್ನೊಂದು ಪ್ರಕರಣದಲ್ಲಿ ಕುಮಾರಿ ಗಿರಿಲಿಂಗಮ್ಮ ತಂದೆ ಕೆ.ಎನ್.ನಾರಾಯಣ, ಲಿಂಗಸಗೂರು ಇವರಿಗೆ ಪ್ರಮಾಣ ಪತ್ರ ನೀಡಲು ಅಕ್ರಮ ಸಂಭಾವನೆಯನ್ನು ನೀಡುವಂತೆ ಒತ್ತಾಯಿಸಿ, ಸದರಿ ವಿಷಯಕ್ಕೆ ಸಂಬಂಧಪಟ್ಟ ಮೂಲ ಕಡತವನ್ನು ಅವರು ತಮ್ಮ ಮನೆಯಲ್ಲಿ ಇರಿಸಿಕೊಂಡಿದ್ದು, ಉದ್ದೇಶ ಪೂರ್ವಕವಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ತಾಲ್ಲೂಕು ಕಛೇರಿಯಲ್ಲಿ ಹಾಜರುಪಡಿಸಿರುವುದಿಲ್ಲವೆಂದು, ರಾಯಚೂರು ಜಿಲ್ಲಾಧಿಕಾರಿಯವರು ವರದಿ ಮಾಡಿದ ಮೇರೆಗೆ ಹಾಗೂ ಮತ್ತೊಂದು ಪ್ರಕರಣದಲ್ಲಿ ಶ್ರೀ ಮಲ್ಲಿಕಾರ್ಜುನ ತಂದೆ ಕೆ.ಎಸ್. ನಾರಾಯಣರಾವ್, ಲಿಂಗಸಗೂರು ಇವರಿಗೆ ಜಾತಿ ಪ್ರಮಾಣ ಪತ್ರ ನೀಡುವಲ್ಲಿ ಸುಮಾರು 3 ತಿಂಗಳುಗಳಿಂದ ವಿಳಂಬ ಮಾಡಿ ನೀಡಿರುವುದಾಗಿ ಹಾಗೂ ಶ್ರೀ ಮಲ್ಲಿಕಾರ್ಜುನ ರವರ ಸಹೋದರರಿಗೆ ಸಲ್ಲದ ಕಾರಣಗಳಿಂದ ಜಾತಿ ಪ್ರಮಾಣ ಪತ್ರ ನೀಡಲು ಸಾಧ್ಯವಿಲ್ಲವೆಂದು ಮತ್ತು ಅದಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಉದ್ದೇಶಪೂರ್ವಕವಾಗಿ ಶ್ರೀ ಹಿರೇಮಠ ರವರು ತಹಶೀಲ್ದಾರ್ ಕಛೇರಿಗೆ ಹಾಜರು

ಪಡಿಸದೆ ಕರ್ತವ್ಯಲೋಪ ಎಸಗಿರುವ ಕಾರಣದಿಂದ ಮೇಲೆ ಓದಲಾದ ಕ್ರಮ ಸಂ: (1)ರಲ್ಲಿ ಸದರಿ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ರಾಯಚೂರು ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರ ಮೇರೆಗೆ ಮೇಲ್ಕಂಡ ಆರೋಪಗಳ ಬಗ್ಗೆ ಆರೋಪಿತರ ವಿರುದ್ಧ ಆರೋಪ ಪಟ್ಟಿಗಳನ್ನು (ಅನುಬಂಧ 1 ರಿಂದ 4ರವರೆಗೆ) ಜಾರಿ ಮಾಡಿ ಸದರಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಲು ಮೇಲೆ ಕ್ರ.ಸಂ: (2)ರಲ್ಲಿ ಓದಲಾದ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು. ಸದರಿ ತಿಳುವಳಿಕೆ ಪತ್ರಕ್ಕೆ ಅನುಗುಣವಾಗಿ ಶ್ರೀ ಸಿ.ಎಂ.ಹಿರೇಮಠರವರು ಮೇಲೆ ಕ್ರ.ಸಂ: (3)ರಲ್ಲಿ ಓದಲಾದ ಲಿಖಿತ ಹೇಳಿಕೆಯನ್ನು ಸಲ್ಲಿಸಿ ಅವರ ವಿರುದ್ಧದ ಎಲ್ಲಾ ಆರೋಪಗಳು ಸತ್ಯಕ್ಕೆ ದೂರವಾಗಿರುತ್ತದೆಯೆಂದು ತಿಳಿಸಿ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ ಹಾಗೂ ಸದರಿ ಆರೋಪಗಳಿಂದ ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಓದಲಾದ ಕ್ರ.ಸಂ: (4) ದಿನಾಂಕ: 07-05-2004ರ ಆದೇಶದಲ್ಲಿ ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುರುವೀಹಾಳ್, ರಾಯಚೂರು ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು, ಮೇಲೆ ಓದಲಾದ ಕ್ರ.ಸಂ. (5) ದಿನಾಂಕ: 13-12-2004 ರಲ್ಲಿ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿ ಶ್ರೀ ಸಿ.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ಲಿಂಗಸಗೂರು ಇವರ ವಿರುದ್ಧ ಹೂಡಲಾಗಿದ್ದ ಮೂರು ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿಲ್ಲವೆಂದು ವರದಿ ಮಾಡಿರುತ್ತಾರೆ. ಆದ್ದರಿಂದ ವಿಚಾರಣಾಧಿಕಾರಿಗಳು ಸಲ್ಲಿಸಿದ್ದ ವರದಿಯನ್ನು ಸರ್ಕಾರವು ಒಪ್ಪಿ ಶ್ರೀ ಸಿ.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ಲಿಂಗಸಗೂರು, ಪ್ರಸ್ತುತ ನಿವೃತ್ತ ಇವರ ವಿರುದ್ಧ ಹೂಡಲಾಗಿದ್ದ ಆರೋಪಗಳಿಂದ ಮುಕ್ತಗೊಳಿಸಲು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 14 ಎಡಿಇ 2003, ಬೆಂಗಳೂರು, ದಿನಾಂಕ: 05ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ವಿಚಾರಣಾಧಿಕಾರಿಗಳು, ಸರ್ಕಾರಕ್ಕೆ ಸಲ್ಲಿಸಿದ್ದ ವರದಿಯಲ್ಲಿ ಶ್ರೀ ಸಿ.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ಲಿಂಗಸಗೂರು ಇವರ ವಿರುದ್ಧ ಆಪಾದನೆಗಳು ಸಾಬೀತಾಗಿಲ್ಲವೆಂದು ವರದಿ ಮಾಡಿರುವುದರಿಂದ ಸರ್ಕಾರವು ಸದರಿ ವರದಿಯನ್ನು ಒಪ್ಪಿ ಶ್ರೀ ಸಿ.ಎಂ. ಹಿರೇಮಠ, ಹಿಂದಿನ ತಹಶೀಲ್ದರ್, ಲಿಂಗಸಗೂರು ಪ್ರಸ್ತುತ ನಿವೃತ್ತ ಇವರ ವಿರುದ್ಧ ಹೂಡಲಾಗಿದ್ದ ಆರೋಪಗಳಿಂದ ಮುಕ್ತಗೊಳಿಸಿ ಈ ಪ್ರಕರಣದ ಮಟ್ಟಿಗೆ ಇಲಾಖಾ ವಿಚಾರಣೆಯಿಂದ ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1033

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಶಾಂತಾರಾಮ್ ಚಿಪಳೂಣಕರ್, ಹಿಂದಿನ ತಹಶೀಲ್ದಾರ್, ಕಾರ್ಕಳ (ಪ್ರಸ್ತುತ ನಿವೃತ್ತ) ಮತ್ತು ಅವರ ಸಿಬ್ಬಂದಿ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ ಇವರ ಪ್ರಸ್ತಾವನೆ ಪತ್ರ ಸಂ: ಇಎಸ್‌ಟಿ (1):ಸಿಆರ್-6/2004-05, ದಿನಾಂಕ: 30-11-2005.
2) ಸರ್ಕಾರದ ಆದೇಶ ಸಂ: ಕಂಇ 2 ಎಡಿಇ 2006, ದಿನಾಂಕ: 11-7-2006.
3) ಶ್ರೀ ಶಾಂತಾರಾಮ್ ಚಿಪಳೂಣಕರ್, ಶ್ರೀ ಸದಾಶಿವ ಕಲ್ಯಾಣಪುರ, ಶ್ರೀ ಬಾಲಕೃಷ್ಣ, ಶ್ರೀ ಶಿವರಾಮ, ಶ್ರೀ ಜೆ.ಎಂ.ಡಾಂಗೆ, ಇವರುಗಳಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸು ದಿನಾಂಕ: 24-11-2006.
4) ಶ್ರೀ ಶಾಂತಾರಾಮ್ ಚಿಪಳೂಣಕರ್, ಶ್ರೀ ಸದಾಶಿವ ಕಲ್ಯಾಣಪುರ, ಶ್ರೀ ಬಾಲಕೃಷ್ಣ, ಶ್ರೀ ಶಿವರಾಮ, ಶ್ರೀ ಜೆ.ಎಂ.ಡಾಂಗೆ ಇವರುಗಳ ಸಮಜಾಯಿಷಿ ದಿ: 19-1-2007, 17-1-2007, 26-12-2006, 22-2-2007 ಮತ್ತು 26-12-2006.

**ಪ್ರಸ್ತಾವನೆ:**

ಶ್ರೀ ಶಾಂತಾರಾಮ್ ಚಿಪಳೂಣಕರ್, ನಿವೃತ್ತ ತಹಶೀಲ್ದಾರರು ಇವರು ಹಿಂದೆ ತಹಶೀಲ್ದಾರ್, ಕಾರ್ಕಳ ಆಗಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ಹಾಗೂ ಇವರ ಸಿಬ್ಬಂದಿ ವರ್ಗದವರು ವಿಠಲ ಪೂಜಾರಿ ಮತ್ತು ಇತರ 40 ಜನರು ಕಾರ್ಕಳ ಕಸಬಾ ಗ್ರಾಮದ ಸರ್ವೆ ನಂ: 175/1 ಮತ್ತು ಇತರೆ ಸ್ಥಳಗಳಲ್ಲಿ ಅಕ್ರಮ ಕಟ್ಟಡ ನಿರ್ಮಿಸಿಕೊಂಡು ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 94ಸಿ ರಂತೆ ನಮೂನೆ 1ರಲ್ಲಿ ಕಟ್ಟಡ ಸಕ್ರಮಣ ಕೋರಿ ಅರ್ಜಿ ಸಲ್ಲಿಸಿದ್ದ ಪ್ರಕರಣಗಳಲ್ಲಿ ಕರ್ತವ್ಯ ನಿಷ್ಠೆ ಇಲ್ಲದೆ

ಇರುವುದನ್ನು ತೋರ್ಪಡಿಸಿ ದುರ್ನಡತೆಯನ್ನು ಎಸಗಿರುವ ಬಗ್ಗೆ ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಮೇಲೆ ಓದಲಾದ ಕ್ರ.ಸಂ.(1)ರನ್ವಯ ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಶಾಂತಾರಾಮ್ ಚಿಪಳೂಣಕರ್, ಹಿಂದಿನ ತಹಶೀಲ್ದಾರ್, ಕಾರ್ಕಳ ಹಾಗೂ ಶ್ರೀ ಸದಾಶಿವ ಕಲ್ಯಾಣಪುರ ಹಿಂದಿನ ಉಪತಹಶೀಲ್ದಾರ್ ಇವರುಗಳು ಈಗಾಗಲೇ ನಿವೃತ್ತಿ ಹೊಂದಿದ್ದರಿಂದ ಮೇಲೆ ಓದಲಾದ ಕ್ರ.ಸಂ.(2) ದಿನಾಂಕ:11–7–2006ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 & 11ಎ ರಡಿಯಲ್ಲಿ ನಿಗಡಿಪಡಿಸಿರುವ ಕಾರ್ಯಬಾರವನ್ನು ಅನುಸರಿಸಬೇಕೆಂದು ಆದೇಶಿಸಿರುತ್ತದೆ. ಉಳಿದ ಸಿಬ್ಬಂದಿ ವರ್ಗದವರಾದ ಶ್ರೀ ಬಾಲಕೃಷ್ಣ, ಹಿಂದಿನ ಕಂದಾಯ ನಿರೀಕ್ಷಕರು, ಶ್ರೀ ಶಿವರಾಮ, ಹಿಂದಿನ ಗ್ರಾಮಲೆಕ್ಕಿಗರು ಮತ್ತು ಶ್ರೀ ಜೆ.ಎಂ. ಡಾಂಗೆ ಹಿಂದಿನ ದ್ವಿತಿಯ ದರ್ಜೆ ಸಹಾಯಕರು ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರ.ಸಂ.(3)ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಅದರಂತೆ, ಶ್ರೀ ಶಾಂತಾರಾಮ್ ಚಿಪಳೂಣಕರ್, ಶ್ರೀ ಸದಾಶಿವ ಕಲ್ಯಾಣಪುರ, ಶ್ರೀ ಬಾಲಕೃಷ್ಣ, ಶ್ರೀ ಶಿವರಾಮ, ಶ್ರೀ ಜೆ.ಎಂ. ಡಾಂಗೆ ಇವರುಗಳು ಸದರಿ ನೋಟೀಸಿಗೆ ಸಮಜಾಯಿಷಿಗಳನ್ನು ನೀಡಿ ಆರೋಪಗಳನ್ನು ಅಲ್ಲಗೆಳೆದು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಜಂಟಿ ಇಲಾಖೆ ವಿಚಾರಣೆಯನ್ನು ಜರುಗಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 02 ಎಡಿಇ 2006, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿದ ಹಿನ್ನಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13ರಡಿಯಲ್ಲಿ ಹಾಗೂ 214 (2) (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಶಾಂತಾರಾಮ್ ಚಿಪಳೂಣಕರ್, ಶ್ರೀ ಸದಾಶಿವ ಕಲ್ಯಾಣಪುರ, ಶ್ರೀ ಬಾಲಕೃಷ್ಣ, ಶ್ರೀ ಶಿವರಾಮ, ಶ್ರೀ ಜೆ.ಎಂ.ಡಾಂಗೆ ಇವರುಗಳ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಲು **ಶ್ರೀ ಎನ್. ಸುಬ್ಬರಾವ್, ನಿವೃತ್ತಾ ಜಿಲ್ಲಾ ನ್ಯಾಯಾಧೀಶರು, ನಂ: 1033, 9ನೇ 'ಬಿ' ಮೇನ್, 8ನೇ ಕ್ರಾಸ್, ಜ್ಯೂಡಿಷಿಯಲ್ ಲೇಔಟ್, ಜಿಕೆವಿಕೆ ಪೋಸ್ಟ್, ಬೆಂಗಳೂರು – 560 064** ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಉಡುಪಿ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ: ಸಿಆಸುಇ 22 ಸೇಇವಿ 2007, ದಿ:11–04–2008 ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ.1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1189

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** 1999ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂ: ಕಂಇ 241 ಎಎಸ್‌ಡಿ 2005(1), ದಿನಾಂಕ: 25-01-2006.
2) ಸರ್ಕಾರದ ಅಧಿಕೃತ ಜ್ಞಾಪನ ಸಂ: ಆರ್‌ಡಿ 241 ಎಎಸ್‌ಡಿ 2005, ದಿನಾಂಕ: 07-04-2006.
3) ಸರ್ಕಾರದ ಪತ್ರ ಸಂ: ಕಂಇ 15 ಎಎಸ್‌ಡಿ 2008, ದಿನಾಂಕ: 18-01-2008 ಹಾಗೂ ಅರೆ ಸರ್ಕಾರಿ ಪತ್ರ ದಿನಾಂಕ: 23-02-2008, 28-04-2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ದಿನಾಂಕ: 25-01-2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 78 ಅಭ್ಯರ್ಥಿಗಳನ್ನು ಪರಿವೀಕ್ಷಣಾ ತಹಶೀಲ್ದಾರ್ ಗುಂಪು-ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 78 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 78 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 07-04-2006ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಅದರಂತೆ, ಇವರುಗಳಲ್ಲಿ ವಿವಿಧ ಕಾರಣಗಳಿಂದ/ ಬೇರೆ ಹುದ್ದೆಗೆ ನೇಮಕಗೊಂಡಿದ್ದರಿಂದ ಒಟ್ಟು 8 ಪರಿವೀಕ್ಷಣಾ ತಹಶೀಲ್ದಾರರುಗಳು (ಶ್ರೀ ಗೋವಿಂದರೆಡ್ಡಿ, ಶ್ರೀಮತಿ ಜ್ಯೋತಿ.ಕೆ, ಶ್ರೀಮತಿ ರೂಪಾ. ಎಂ, ಶ್ರೀ ವಸಂತಕುಮಾರ್. ಪಿ, ಶ್ರೀಮತಿ ಸಂಗೀತಾ ಗಜಾನನ ಭಟ್, ಶ್ರೀ ಕರಿಗೌಡ, ಶ್ರೀಮತಿ ಚೇತನಶ್ರೀ. ಹೆಚ್.ಸಿ) ಸೇವೆಯಿಂದ ಬಿಟ್ಟುಹೋಗಿರುತ್ತಾರೆ. ಮತ್ತು ಶ್ರೀ ಮುರ್ಷುದ್ದೀನ್ ಕಿಲ್ಲೇದಾರ್ ಇವರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ಇನ್ನುಳಿದ 70 ಪರಿವೀಕ್ಷಣಾ ತಹಶೀಲ್ದಾರರುಗಳ ನಿಗದಿತ ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣರಾಗಿರುವ ಬಗ್ಗೆ, ಜಿಲ್ಲಾ ತರಬೇತಿಯಲ್ಲಿದ್ದಾಗ, ತರಬೇತಿಯನ್ನು ತೃಪ್ತಿಕರವಾಗಿ ಪೂರೈಸಿರುವ ಬಗ್ಗೆ ಹಾಗೂ ಇವರುಗಳ ವಿರುದ್ಧ ಇಲಾಖಾ ವಿಚಾರಣೆಗಳ ಬಗ್ಗೆ ಮಾಹಿತಿಯನ್ನು ಮೇಲೆ ಓದಲಾದ ಕ್ರ.ಸಂ.(3)ರ ದಿನಾಂಕ: 18-01-2008ರಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳಿಂದ ಪಡೆಯಲು ಪತ್ರ ಬರೆಯಲಾಗಿತ್ತು. ಅದರಂತೆ, ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿ ಇದ್ದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿಸಿ ಸೇರಿ) ಉತ್ತೀರ್ಣರಾಗಿರುವುದಾಗಿ

ಹಾಗೂ ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಕಾರ್ಯ ನಿರ್ವಹಿಸಿರುತ್ತಾರೆ ಎಂದು ಶಿಫಾರಸ್ಸು ಮಾಡಿರುವುದರಿಂದ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ಈ ಕೆಳಕಂಡ 55 ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 15 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 25ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಈ ಕೆಳಕಂಡ 55 ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

ಉಳಿದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ಜಿಲ್ಲಾಧಿಕಾರಿಗಳಿಂದ ಮಾಹಿತಿ ಪಡೆದು ನಂತರದಲ್ಲಿ, ಆದೇಶ ಹೊರಡಿಸಲಾಗುವುದು.

| ಕ್ರ. ಸಂ. | ಪರಿವೀಕ್ಷಣಾ ತಹಶೀಲ್ದಾರರ ಹೆಸರು – (ಶ್ರೀ/ ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ರಾಜೇಂದ್ರ ಪ್ರಸಾದ್. ಎಂ.ಎನ್ | 31-01-2006 | 30-01-2008 |
| 2 | ರುದ್ರೇಶ್. ಎಸ್.ಎನ್ | 27-01-2006 | 26-01-2008 |
| 3 | ಪ್ರಶಾಂತ್. ನಾಲವಾರ | 03-02-2006 | 02-02-2008 |
| 4 | ಪ್ರಸನ್ನ.ವಿ | 01-02-2006 | 31-01-2008 |
| 5 | ಅಮರೇಶ್. ಹೆಚ್ | 30-01-2006 | 29-01-2008 |

| ಕ್ರ. ಸಂ. | ಪರಿವೀಕ್ಷಣಾ ತಹಶೀಲ್ದಾರರ ಹೆಸರು – (ಶ್ರೀ/ ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 6 | ಶಂಕರಪ್ಪ ವಣಕ್ಯಾಳ | 01–02–2006 | 31–01–2008 |
| 7 | ನಾಗೇಂದ್ರ. ಎಫ್. ಹೊನ್ನಳ್ಳಿ | 03–02–2006 | 02–02–2008 |
| 8 | ಲೋಕನಾಥ್.ಆರ್ | 27–01–2006 | 26–01–2008 |
| 9 | ಶರಣಬಸಪ್ಪ ಕೊಟ್ಯಪ್ಪಗೋಳ್ | 27–01–2006 | 26–01–2008 |
| 10 | ರಾಘವೇಂದ್ರ.ವಿ | 27–01–2006 | 26–01–2008 |
| 11 | ಮಾರುತಿ. ಎಂ.ಪಿ | 27–01–2006 | 26–01–2008 |
| 12 | ನಾಗರಾಜು.ಸಿ | 03–02–2006 | 02–02–2008 |
| 13 | ಶಂಕರಗೌಡ ಸೋಮನಾಳ್ | 27–01–2006 | 26–01–2008 |
| 14 | ಯೋಗೇಶ್ವರ. ಎಸ್ | 03–02–2006 | 02–02–2008 |
| 15 | ಮಹೇಶ್ ಕರ್ಜಗಿ | 03–02–2006 | 02–02–2008 |
| 16 | ಬಸವರಾಜ್ ಸೋಮಣ್ಣನವರ್ | 08–02–2006 | 07–02–2008 |
| 17 | ಮಂಜುನಾಥ್.ಸಿ | 27–01–2006 | 26–01–2008 |
| 18 | ಇಲಿಯಾಸ್ ಅಹಮದ್ ಇಸಾಮದಿ | 31–01–2006 | 30–01–2008 |
| 19 | ಶೀಲವಂತ ಶಿವಕುಮಾರ್ | 01–02–2006 | 31–01–2008 |
| 20 | ಶಿವಸ್ವಾಮಿ | 01–02–2006 | 31–01–2008 |
| 21 | ಪೂಜಾರ್ ವೀರಮಲ್ಲಪ್ಪ | 06–02–2006 | 05–02–2008 |
| 22 | ಸಿದ್ರಾಮಪ್ಪ ಬಿರಾದಾರ | 02–02–2006 | 01–02–2008 |
| 23 | ಶ್ವೇತಾ. ಜಿ.ಎನ್ | 27–01–2006 | 26–01–2008 |
| 24 | ನಾಗರಾಜ್. ಜಿ.ವಿ | 01–02–2006 | 31–01–2008 |
| 25 | ಬಾಲಕೃಷ್ಣಪ್ಪ. ಇ | 30–01–2006 | 29–01–2008 |
| 26 | ಕೃಷ್ಣಕುಮಾರ್. ಸಿ.ಜೆ | 27–01–2006 | 26–01–2008 |
| 27 | ಶೈಲಜ. ವಿ.ಆರ್ | 27–01–2006 | 26–01–2008 |
| 28 | ಕೃಷ್ಣಮೂರ್ತಿ. ಹೆಚ್.ಕೆ | 27–01–2006 | 26–01–2008 |
| 29 | ಜ್ಞಾನೇಶ್. ಹೆಚ್ | 27–01–2006 | 26–01–2008 |
| 30 | ರೂಪಶ್ರೀ. ಎಸ್ | 27–01–2006 | 26–01–2008 |
| 31 | ನಂಜುಂಡೇಗೌಡ | 30–01–2006 | 29–01–2008 |
| 32 | ಮಂಜುನಾಥ್. ಸಿ.ಎನ್ | 02–02–2006 | 01–02–2008 |
| 33 | ಗೀತಾ ಕೌಲಗಿ | 03–02–2006 | 02–02–2008 |
| 34 | ಪ್ರಜ್ಞಾ ಅಮ್ಮೆಂಬಳ | 27–01–2006 | 26–01–2008 |
| 35 | ಭಜಂತ್ರಿ ಶಿವಪ್ಪ ಯಲ್ಲಪ್ಪ | 08–02–2006 | 07–02–2008 |
| 36 | ಶೈಲಜ ಪ್ರಿಯದರ್ಶಿನಿ.ಎ.ಎಂ | 31–01–2006 | 30–01–2008 |
| 37 | ಸೋಮಲಿಂಗ್ ಗೋಪಾಲ್ ಹರಿಜನ್ | 06–02–2006 | 05–02–2008 |
| 38 | ಬಾಬು. ಎಂ.ಎಸ್.ಎನ್ | 30–01–2006 | 29–01–2008 |
| 39 | ರವಿಕುಮಾರ್. ಎಂ | 03–02–2006 | 02–02–2008 |
| 40 | ರಾಜಶ್ರೀ ಜೈನಾಪುರ | 27–01–2006 | 26–01–2008 |

| ಕ್ರ. ಸಂ. | ಪರಿವೀಕ್ಷಣಾ ತಹಶೀಲ್ದಾರರ ಹೆಸರು – (ಶ್ರೀ/ ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 41 | ಲೋಕೇಶ್. ಪಿ.ಎನ್ | 30–01–2006 | 29–01–2008 |
| 42 | ಆಶಾ.ಎಸ್ | 27–01–2006 | 26–01–2008 |
| 43 | ಚಂದ್ರಮ್ಮ. ವೈ.ಎನ್ | 27–01–2006 | 26–01–2008 |
| 44 | ಸುಮ. ಆರ್ | 27–01–2006 | 26–01–2008 |
| 45 | ಕೃಷ್ಣವೇಣಿ. ಬಿ.ವಿ | 27–01–2006 | 26–01–2008 |
| 46 | ಮಹಮದ್ ಝುಬೇದ. ಎನ್ | 04–02–2006 | 03–02–2008 |
| 47 | ಮತಾಯ್.ಕೆ | 03–02–2006 | 02–02–2008 |
| 48 | ಯಶೋಧ.ಆರ್ | 27–01–2006 | 26–01–2008 |
| 49 | ಪ್ರಮೀಳಾ. ಎಂ.ಕೆ | 31–01–2006 | 30–01–2008 |
| 50 | ಕೇಶವರಾಜ.ಕೆ | 30–01–2006 | 29–01–2008 |
| 51 | ರೇಣುಕಾ. ಎ.ಸಿ | 02–02–2006 | 01–02–2008 |
| 52 | ನಾಗರಾಜ್.ವಿ | 30–01–2006 | 29–01–2008 |
| 53 | ತಬಸ್ಸುಮ್ ಜಹೀರಾ | 31–01–2006 | 30–01–2008 |
| 54 | ಅರುಣಪ್ರಭಾ. ಹೆಚ್.ಎಸ್ | 01–02–2006 | 31–01–2008 |
| 55 | ಮಲ್ಲಿಕಾರ್ಜುನ್. ವೈ.ಎಸ್ | 02–02–2006 | 01–02–2008 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1121

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** 1998ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂ: ಕಂಇ 08 ಎಟಿಎಸ್ 2006, ದಿನಾಂಕ: 15–04–2006.
2) ಸರ್ಕಾರದ ಅಧಿಕೃತ ಜ್ಞಾಪನ ಸಂ: ಕಂಇ 08 ಎಟಿಎಸ್ 2006, ದಿನಾಂಕ: 21–04–2006.
3) ಸರ್ಕಾರದ ಪತ್ರ ಸಂ: ಕಂಇ 166 ಎಎಸ್‌ಡಿ 2008, ದಿನಾಂಕ: 26–04–2008, 26–07–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ದಿನಾಂಕ: 15–04–2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 50 ಅಭ್ಯರ್ಥಿಗಳನ್ನು ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 50 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ 50 ಪೈಕಿ 49 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 21–04–2006ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಅದರಂತೆ, ಇವರುಗಳಲ್ಲಿ ವಿವಿಧ ಕಾರಣಗಳಿಂದ/ ಬೇರೆ ಹುದ್ದೆಗೆ ನೇಮಕಗೊಂಡಿದ್ದರಿಂದ ಒಟ್ಟು 2 ಪರಿವೀಕ್ಷಣಾ ತಹಶೀಲ್ದಾರರುಗಳು ( ಶ್ರೀ ಶಿವಪ್ರಸಾದ್ ಮತ್ತು ಶ್ರೀಮತಿ ಭಾರತಿ.ಡಿ) ಸೇವೆಯಿಂದ ಬಿಟ್ಟುಹೋಗಿರುತ್ತಾರೆ. ಮತ್ತು ಶ್ರೀ ಮಲ್ಲಿಕಾರ್ಜುನ್ ಇವರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಇನ್ನುಳಿದ 47 ಪರಿವೀಕ್ಷಣಾ ತಹಶೀಲ್ದಾರರುಗಳ ನಿಗದಿತ ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣರಾಗಿರುವ ಬಗ್ಗೆ, ಜಿಲ್ಲಾ ತರಬೇತಿಯಲ್ಲಿದ್ದಾಗ, ತರಬೇತಿಯನ್ನು ತೃಪ್ತಿಕರವಾಗಿ ಪೂರೈಸಿರುವ ಬಗ್ಗೆ ಹಾಗೂ ಇವರುಗಳ ವಿರುದ್ಧ ಇಲಾಖಾ ವಿಚಾರಣೆಗಳ ಬಗ್ಗೆ

ಮಾಹಿತಿಯನ್ನು ಮೇಲೆ ಓದಲಾದ ಕ್ರ.ಸಂ.(3)ರ ದಿನಾಂಕ: 26–04–2008 ಮತ್ತು 26–07–2008 ರಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳಿಂದ ಪಡೆಯಲು ಪತ್ರ ಬರೆಯಲಾಗಿತ್ತು. ಅದರಂತೆ, ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿ ಇದ್ದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ

ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಕಾರ್ಯ ನಿರ್ವಹಿಸಿರುತ್ತಾರೆ ಎಂದು ಶಿಫಾರಸ್ಸು ಮಾಡಿರುವುದರಿಂದ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ಈ ಕೆಳಕಂಡ 17 ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 166 ಎಎಸ್‌ಡಿ 2008, ಬೆಂಗಳೂರು,ದಿನಾಂಕ: 21ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಈ ಕೆಳಕಂಡ 17 ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

ಉಳಿದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ಜಿಲ್ಲಾಧಿಕಾರಿಗಳಿಂದ ಮಾಹಿತಿ ಪಡೆದು ನಂತರದಲ್ಲಿ, ಆದೇಶ ಹೊರಡಿಸಲಾಗುವುದು.

| ಕ್ರ.ಸಂ. | ಪರಿವೀಕ್ಷಣಾ ತಹಶೀಲ್ದಾರರ ಹೆಸರು – (ಶ್ರೀ/ ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಪ್ರವೀಣ್.ಪಿ. ಬಾಗೇವಾಡಿ | 28–04–2006 | 27–04–2008 |
| 2 | ಕಾತ್ಯಾಯಿನಿದೇವಿ. ಎಸ್ | 21–04–2006 | 20–04–2008 |
| 3 | ಮಹದೇವ್.ಎ.ಮುರಗಿ | 26–04–2006 | 25–04–2008 |
| 4 | ನಾಗಹನುಮಯ್ಯ.ಬಿ.ಹೆಚ್ | 17–04–2006 | 16–04–2008 |
| 5 | ರವಿ.ಎಂ.ತಿರ್ಲಾಪುರ್ | 22–04–2006 | 21–04–2008 |
| 6 | ಶಶಿಧರ್ ಬಗಲಿ | 26–04–2006 | 25–04–2008 |
| 7 | ಇಸ್ಮಾಯಿಲ್ ಸಾಹೇಬ್ ಶಿರಹಟ್ಟಿ | 24–04–2006 | 23–04–2008 |
| 8 | ವಾಣಿ.ವಿ | 17–04–2006 | 16–04–2008 |
| 9 | ಕವಿತಾ ರಾಜರಾಂ | 21–04–2006 | 20–04–2008 |
| 10 | ರೇಖಾ.ಟಿ | 19–04–2006 | 18–04–2008 |
| 11 | ಸುರೇಶ್‌ಕುಮಾರ್.ಕೆ.ಎಂ | 24–04–2006 | 23–04–2008 |
| 12 | ವಿಜಯಕುಮಾರ್ ಹೊನಕೇರಿ | 21–04–2006 | 20–04–2008 |
| 13 | ನಾಗರಾಜ್.ಎಲ್.ಸಿ | 26–04–2006 | 25–04–2008 |
| 14 | ರೂಪಕಲಾ.ಟಿ.ಕೆ | 21–04–2006 | 20–04–2008 |
| 15 | ರೂಪ.ಆರ್ | 20–04–2006 | 19–04–2008 |
| 16 | ಶಾರದಾ. ಸಿ. ಕೋಲ್ಕರ್ | 25–04–2006 | 24–04–2008 |
| 17 | ಕವಿತರಾಣಿ.ಆರ್ | 17–04–2006 | 16–04–2008 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1219

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## FOREST, ECOLOGY AND ENVIRONMENT SECRETARIAT

**Sub:** Constitution of Monitoring and Evaluation Committee for the facilitation centre.

**Read:** 1) Letter No: Z-18017/190/2007-08-NMPB, dt: 3-4-2008 of the Ministry of Health & Family Welfare, Department of (AYUSH), National Medicinal Plant Board, Government of India.

2) Proceedings of the Executive Committee meeting of Karnataka State Medicinal Plants Authority (KAMPA) held on 5-5-2008
3) Letter No: KAMPA/MGT/MC/0800612.1 dt: 12-06-2008 of the Chief Executive Officer, Karnataka State Medicinal Plants Authority, Bangalore.

**PREAMBLE:**

In the letter read at (1) above, the Chief Executive Officer, National Medicinal Plant Board has informed that National Medicinal Plants Board has decided to set up of Facilitation Centres for providing service on all aspects related to Medicinal Plants at Agricultural Universities and other R and D Institutions located in the States which have the necessary expertise and infrastructures and also the activities and performance of the Facilitation Centres need to be monitored on a periodic basis, he has requested the State Government to constitute a Monitoring and Evaluation Committee.

2. The Executive Committee meeting of the Karnataka State Medicinal Plants Authority held on 5-5-2008 vide read at (2) above, has discussed the proposal of National Medicinal Plants Board and recommends to the Government to constitute a monitoring committee for the Facilitation Centre as envisaged by National Medicinal Plants Board with the following memberships viz., Development Commissioner as Chairman, Principal Chief Conservator of Forests, Additional Principal Chief Conservator of Forests- Karnataka State Medicinal Plants Authority, Secretary AYUSH, Secretary Forest, Secretary Agriculture, vice Chancellor, University of Agricultural Sciences, Head of CIMAP, President, Medicinal Plant Growers Association as members.

3. In the letter read at (3) above, the Additional Chief Conservator of Forests and Chief Executive Officer of Karnataka, State Medicinal Plants Authority has recommended for the constitution of Monitoring and Evaluation Committee to the Facilitation Center at University of Agricultural Sciences, Gandhi Krishi Vignana Kendra, Bangalore as follows:

| | | |
|---|---|---|
| 1. | The Agriculture Commissioner | : Chairman |
| 2. | The Secretary to Government, Indian System of Medicines and Homeopathy or his nominee | : Member |
| 3. | The Secretary to Government, Horticulture or his nominee | : Member |
| 4. | The Secretary to Government, Forest or his nominee | : Member |
| 5. | The Principal Chief Conservator of Forests or his nominee | : Member |
| 6. | The Vice-Chancellor, University of Agricultural Sciences, Bangalore | : Member |
| 7. | The Scientist in-charge, Central Institute of Medicinal and Aromatic Crops (CIMAP), Bangalore | : Member |
| 8. | The President, Medicinal Plants Growers Association | : Member |
| 9. | The Chief Executive Officer, Karnataka State Medicinal Plants Authority (KAMPA), Bangalore | : Convener |

Hence, the following order:

**GOVERNMENT ORDER NO: FEE 65 FPC 2008, BANGALORE, DATED: 25th August 2008**

In the circumstance explained in the preamble, the Government is pleased to constitute a Monitoring and Evaluation Committee for the Facilitation Centre at University of Agricultural Sciences, Gandhi Krishi Vignana Kendra, Bangalore as per the guidelines of National Medicinal Plants Board to uplift the facilities and services available for the medicinal plants growers in the state as follows.

| | | |
|---|---|---|
| 1. | The Agriculture Commissioner | : Chairman |
| 2. | The Secretary to Government, Indian System of Medicines and Homeopathy or his nominee | : Member |
| 3. | The Secretary to Government, Horticulture or his nominee | : Member |
| 4. | The Secretary to Government, Forest or his nominee | : Member |
| 5. | The Principal Chief Conservator of Forests or his nominee | : Member |

6. The Vice-Chancellor, University of Agricultural Sciences, Bangalore : Member
7. The Scientist in-charge, Central Institute of Medicinal and Aromatic Crops (CIMAP), Bangalore : Member
8. The President, Medicinal Plants Growers Association : Member
9. The Chief Executive Officer, Karnataka State Medicinal Plants Authority (KAMPA), Bangalore : Convener

The above Monitoring and Evaluation Committee should meet periodically and review the activities and performances of the Facilitation Centre so that they provide the service for which they have been set up.

By Order and in the Name of the Governor of Karnataka,

P.R. 1256

**H.M. MALLIKARJUNASWAMY**

Under Secretary to Government,

Forest, Ecology & Environment Department.

**Sub:** JBIC Phase II - Karnataka Sustainable Forest Management & Bio-diversity Conservation Project- Sanction of the Annual Plan of Operation for the year 2008-09.

**Read:** 1) G.O. No: FEE 279 FAP 2003, dated: 23-05-2005.
2) G.O. No: FEE 162 FAP 2005, dated: 12-09-2005.
3) G.O. No: FEE 97 FAP 2006, dated: 19-07-2006.
4) G.O. No. FEE 79 FAP 2007, dated: 14-06-2007.
5) Letter No: D1/BUD/CR-95/2008-09 dated: 13-06-2008 from the Principal Chief Conservator of Forests Bangalore.

**Preamble:**

In G.O. referred at (1) above, Karnataka Sustainable Forest Management & Bio-diversity Conservation Project has been approved for implementation from 2005-06 to 2012-2013 with a total outlay of Rs. 745.00 crores in the State over a period of 8 years with certain conditions.

In G.O. referred at (2) above, sanction has been accorded for Annual Plan Operations for the year 2005-06 with an outlay Rs. 77.20 crores under the JBIC Phase II - Assisted Karnataka Sustainable Forest Management & Bio-diversity Conservation Project.

In G.O. referred at (3) above, sanction has been accorded for Annual Plan Operations for the year 2006-07 with an outlay Rs. 108.70 crores under the JBIC Phase II - Assisted Karnataka Sustainable Forest Management & Bio-diversity Conservation Project.

In G.O. referred at (4) above, sanction has been accorded for Annual Plan Operations for the year 2007-08 with an outlay Rs. 137.62 crores under the JBIC Phase II - Assisted Karnataka Sustainable Forest Management & Bio-diversity Conservation Project.

In the letter referred at (5) above, the Principal Chief Conservator of Forests has informed that the Special Empowered Committee has in its 5th meeting held on 12-06-2008 approved the Annual Plan Operation under the Project for the year 2008-09 with an outlay of Rs. 139.69 crores and backlog works of 2005-06, 2006-07and 2007-08 for implementation during 2008-09 with an outlay of Rs. 2,353.924 lakhs and has sought issue of Government Order in this regard.

The proposal has been examined in detail. The Government approves the Annual Plan of Operations for the year 2008-09 for an outlay of Rs. 139.69 crores which also includes the Honorarium of Forest Motivators to an extent of Rs. 2.70 crores and incurring expenditure on backlog works of 2005-06, 2006-07and 2007-08 during 2008-09 to an extent of Rs. 13.30 crores. Hence the order.

**Government Order No: FEE 85 FAP 2008, Bangalore, dated: 02nd July 2008.**

In the circumstances explained above, sanction is accorded to the JBIC Phase II- Karnataka Sustainable Forest Management & Bio-diversity Conservation Project Annual Plan of Operations for the year 2008-09 for an outlay of Rs. 139.69 crores (one hundred thirty nine crores and sixty nine lakhs

rupees only) as detailed in the Annexure to this Government Order. Sanction is also accorded to meet the expenditure on the Honorarium of Forest Motivators to an extent of Rs. 2.70 crores and on backlog works of 2005-06, 2006-07 and 2007-08 to an extent of Rs. 13.30 crores, on Afforestation, Protected Area Management & Biodiversity Conservation, Participatory Forest Management, Supporting Activates for Forest Management and Basic Infrastructure for Field Work and for the procurement of additional 60 computers and 16 vehicles, out of the overall outlay of Rs. 139.69 crores, during 2008-09.

This order is in accordance with the decisions taken in the 5th meeting of the Empowered Committee held on 12-06-2008.

By order and in the name of Governor of Karnataka,

**H.M. MALLIKARJUNA SWAMY**

Under Secretary to Government,

Forest, Environment & Ecology Department.

**ANNEXURE –1**

**ANNURAL PROGRAMME OF WORKS FOR THE YEAR 2008-09 UNDER JBIC ASSISTED KSFMBC PROJECT**

| Sl. No. | Components / Activities | Unit | Target | |
|---|---|---|---|---|
| | | | Physical | Financial (Rs. in lakhs) |
| 1 | 2 | 3 | 4 | 5 |
| **1** | **AFFORESTATION** | | | |
| **1.1** | **Model-1-Ecological Restoration through natural regeneration** | | | |
| 1.11 | 3rd year maintenance | Ha. | 10,064 | 91.582 |
| 1.12 | 2nd year maintenance | Ha. | 6,040 | 54.964 |
| 1.13 | 1st year maintenance | Ha. | 4,960 | 85.312 |
| 1.14 | Monsoon Work | Ha. | 6,000 | 419.353 |
| **1.2** | **Model-2-Assisted Natural Regeneration** | | | |
| 1.21 | 1st year maintenance | Ha. | 4,620 | 110.880 |
| 1.22 | Raising of Plantation | Ha. | 14,665 | 727.384 |
| 1.23 | Advance Work | Ha. | 14,572 | 1,776.341 |
| **1.3** | **Model-3-Plantations for Timber production** | | | |
| 1.31 | 2nd year maintenance | Ha. | 25 | 0.573 |
| 1.32 | 1st year maintenance | Ha. | 7,883 | 295.613 |
| 1.33 | Raising of Plantation | Ha. | 6,170 | 499.770 |
| 1.34 | Advance Work | Ha. | 6,000 | 988.800 |
| **1.4** | **Model-4-Plantations for Fuel Wood & Small Timber Production** | | | |
| 1.41 | 2nd year maintenance | Ha. | 13,615 | 147.042 |
| 1.42 | 1st year maintenance | Ha. | 8,000 | 338.400 |
| 1.43 | Raising of Plantation | Ha. | 7,000 | 768.600 |
| 1.44 | Advance Work | Ha. | 7,000 | 1,197.700 |
| **1.5** | **Model-5-NTFP Plantations** | | | |
| 1.51 | 1st year maintenance | Ha. | 5,950 | 348.075 |
| 1.52 | Raising of Plantation | Ha. | 6,025 | 456.695 |
| 1.53 | Advance Work | Ha. | 6,000 | 715.200 |

| 1 | 2 | 3 | 4 | 5 |
|---|---|---|---|---|
| **1.6** | **Model-6-School Forest** | | | |
| 1.61 | 1st year maintenance | Ha. | 360 | 3.600 |
| 1.62 | Raising of Plantation | Ha. | 699 | 32.923 |
| 1.63 | Advance Work | Ha. | 700 | 51.940 |
| **1.7** | **Model-7-Restoration of Mangroves** | | | |
| 1.71 | 1st year maintenance | Ha. | 600 | 34.440 |
| 1.72 | Monsoon Work | Ha. | 310 | 80.507 |
| | **Sub Total** | | - | **9,225.693** |
| **1.8** | **Model-8-Farm Forestry** | | | |
| 1.81 | 8a- Raising Demonstration Plots | Ha. | 390 | 55.575 |
| 1.82 | Workshops/discussion/seminar on Farm Forestry, Tree based agriculture Tree | Nos. | 10 | 4.500 |
| 1.83 | Rewards and incentives for successful farmers | Nos. | 200 | 2.100 |
| | **Sub Total** | | - | **62.175** |
| **1.9** | **Soil Conservation & Water Ha.rvesting Measures** | | | |
| 1.91 | Model-1-Ecological Restoration through natural regeneration | Ha. | 6,000 | 94.800 |
| 1.92 | Model-2-Assisted Natural Regeneration | Ha. | 14,572 | 473.590 |
| 1.93 | Model-3-Plantations for Timber production | Ha. | 6,000 | 275.400 |
| 1.94 | Model-4-Plantations for Fuel Wood & Small Timber Production | Ha. | 7,000 | 350.000 |
| 1.95 | Model-5-NTFP Plantations | Ha. | 6,000 | 271.200 |
| | **Sub Total** | | - | **1,464.990** |
| | **Total** | | - | **10,752.858** |
| **2** | **PROTECTED AREA MANAGEMENT & BIO-DIVERSITY CONSERVATION** | | | |
| 2.1 | New Fire line Formation | Km. | 413 | 4.011 |
| 2.2 | Ha.bitat Improvement | Ha. | 704 | 10.190 |
| **2.3** | **Eco-development works** | | | |
| 2.31 | Vaccination, Fodder Development in the Fringe Villages, | Nos. | 132 | 144.931 |
| 2.32 | New ElepHa.nt Proof Trench (EPT) | Km. | 47 | 67.750 |
| 2.33 | EPT Maintenance | Km. | 47 | 10.840 |
| | **Total** | | - | **237.722** |
| **3** | **PARTICIPATORY FOREST MANAGEMENT** | | | |
| 3.1 | 2nd Installment of IGA for 2007-08 VFCs | Nos. | 364 | 163.800 |
| 3.2 | 3rd Installment of IGA for 2006-07 VFCs | Nos. | 419 | 125.700 |
| 3.3 | JFPM Co-ordinator | No. | 1 | 6.000 |
| 3.4 | Lead NGOs | Nos. | 5 | 12.000 |
| 3.5 | JFPM Facilitators | Nos. | 60 | 86.400 |
| | **Total** | | - | **393.900** |
| **4** | **SUPPORTING ACTIVITIES FOR FOREST MANAGEMENT** | | | |
| **4.1** | **Operation Cost** | | | |
| 4.11 | 2nd year Maintenance of Clonal Seed Orchard | Ha. | 78 | 7.441 |
| 4.12 | 1st year Maintenance of Clonal Seed Orchard | Ha. | 77 | 10.100 |

| 1 | 2 | 3 | 4 | 5 |
|---|---|---|---|---|
| 4.13 | Clonal Seed Orchard-Planting | Ha. | 107 | 28.069 |
| 4.14 | Clonal Seed Orchard Advance Work | Ha. | 115 | 30.168 |
| 4.15 | 2nd year Maintenance Seedlings Seed Orchard | Ha. | 52 | 4.650 |
| 4.16 | 1st year Maintenance Seedlings Seed Orchard | Ha. | 137 | 9.965 |
| 4.17 | Seedlings Orchard-Planting | Ha. | 135 | 27.366 |
| 4.18 | Seedlings Seed Orchard - Advance Work | Ha. | 150 | 28.032 |
| 4.19 | 2nd Year Maintenance- Seed Production Area-Teak | Ha. | 126 | 6.010 |
| 4.2 | 1st Year Maintenance- Seed Production Area-Teak | Ha. | 100 | 19.078 |
| 4.21 | 2nd Maintenance -Seed Production area-Non-Teak | Ha. | 265 | 12.639 |
| 4.22 | 1st Maintenance -Seed Production area-Non-Teak | Ha. | 300 | 33.983 |
| 4.23 | 2nd Year Maintenance of CMA-VMG | Ha. | 24 | 3.076 |
| 4.24 | 1st Year Maintenance of CMA-VMG | Ha. | 117 | 16.741 |
| 4.25 | CMA-VMG -Planting | Ha. | 115 | 34.282 |
| 4.26 | CMA-VMG -Advance Work | Ha. | 125 | 36.145 |
| 4.27 | 1st Maintenance of Germ Plasm Bank | Ha. | 21 | 1.502 |
| 4.28 | Germ Plasm Bank-Planting | Ha. | 18 | 3.434 |
| 4.29 | Germ Plasm Bank-Advance Work | Ha. | 25 | 5.157 |
| 4.30 | 2nd Year Maintenance of Species Tril Plot& Progeny Trail | Ha. | 6 | 0.393 |
| 4.31 | 1st Year Maintenance of Species Tril Plot& Progeny Trail | Ha. | 81 | 5.795 |
| 4.32 | Species Tril Plot& Progeny Trail-Planting | Ha. | 67 | 12.783 |
| 4.33 | Species Tril Plot& Progeny Trail-Advance Work | Ha. | 75 | 15.471 |
| 4.34 | Identification & Maintenance of Plus Trees | Ha. | 800 | 23.848 |
| **4.2** | **Studies** | | | |
| 4.21 | Ecological | Nos. | 2 | 2.602 |
| 4.22 | Socio-economic | Nos. | 4 | 2.168 |
| 4.23 | Silvicultural Research | Nos. | 3 | 3.252 |
| 4.24 | Research Fellowship | Nos. | 4 | 2.168 |
| 4.25 | Research (contract) | Nos. | 2 | 2.168 |
| 4.26 | Dissemination / Publication | Nos. | - | 3.252 |
| **4.3** | **3.Training** | | | |
| **4.31** | **Overseas Training** | | | |
| 4.311 | 2-12 Months | Nos. | 6 | 52.032 |
| 4.312 | MSc., / Ph D., | Nos. | - | - |
| **4.4** | **Consultancy** | | | |
| 4.41 | JFPM | No. | 1 | 0.528 |
| 4.42 | Bio-diversity | Nos. | 2 | 1.084 |
| 4.43 | Monitoring & Evaluation | Nos. | - | - |
| | **Total** | | - | **445.382** |
| **5** | **BASIC INFRASTRUCTURE FOR FIELD WORK** | | | |
| 5.1 | Vehicles | Nos. | 10 | 53.730 |
| 5.2 | Computers | Nos. | 74 | 37.000 |
| 5.3 | Telephone | Nos. | 45 | 4.400 |
| 5.4 | Broadband Internet/ e-governance | Nos. | 7 | 7.000 |
| **5.5** | **Buildings** | | | |
| 5.51 | Residential Buildings | Nos. | 14 | 81.300 |
| 5.52 | Non-Residential Buildings | Nos. | 4 | 43.000 |

| 1 | 2 | 3 | 4 | 5 |
|---|---|---|---|---|
| **5.6** | **Work Shops Technical** | | | |
| 5.61 | Head office | No. | 1 | 5.000 |
| 5.62 | Circles / Divisions | Nos. | 2 | 4.000 |
| **5.7** | **Office Equipment** | | | |
| 5.71 | Fax / Photo copying machines | Nos. | - | - |
| 5.72 | Cable Broadband Internet Connection Facility Service | Nos. | 2 | 2.000 |
| 5.73 | Dialup Internet Connection Kit | Nos. | 18 | 0.208 |
| | **Total** | | - | **237.638** |
| **6** | **REPAIR, MAINTENANCE AND OFFICE EXPENSES (RMOE)** | | | |
| 6.1 | Office expenditure including telephone charges | Nos. | 30 | 75.500 |
| 6.2 | Repairs | Nos. | 10 | 10.000 |
| 6.3 | Fuel Expenditure | Nos. | 80 | 100.000 |
| 6.4 | Travel Allowances | Nos. | 40 | 56.000 |
| 6.5 | Building Maintenance | Nos. | 200 | 60.000 |
| | **Total** | | - | **301.500** |
| **7** | **SALARY OF REDEPLOYED STAFF** | **Nos.** | **2,053** | **1,600.000** |
| | **GRAND TOTAL** | | | **13,969.000** |

By Order and in the Name of the Governor of Karnataka,

P.R. 1015

**H.M. MALLIKARJUNASWAMY**

Under Secretary to Government,

Forest, Ecology & Environment Department.

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** OISCA International South India Chapter ಸಂಸ್ಥೆಯಿಂದ Children's Forest Program-Karnataka ಎಂಬ ಯೋಜನೆಯನ್ನು ಶಾಲಾ ಮಕ್ಕಳಿಗೆ ಅರಿವು ಉಂಟು ಮಾಡಲು ಮತ್ತು ಶಾಲಾ ಅರಣ್ಯ ನಿರ್ಮಾಣ ಕಾರ್ಯಕ್ರಮ ಅನುಷ್ಠಾನಗೊಳಿಸಲು ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: ಡಿ1/ಬಿಯುಡಿ/ ಸಿಆರ್–95/2008–09, ದಿನಾಂಕ 21–06–2008 ಮತ್ತು 14–07–2008.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 21–06–2008 ಮತ್ತು 14–07–2008ರ ಪತ್ರದಲ್ಲಿ OISCA-International South India Chapter, Calicut, Kerala ಭಾರತ ಸರ್ಕಾರದಲ್ಲಿ ನೋಂದಾಣೆಯಾದಂತಹ ಸರ್ಕಾರೇತರ ಸಂಸ್ಥೆಯಾಗಿದ್ದು, ಇವರು Children's Forest Program - Karnataka ಎಂಬ ಯೋಜನೆಯನ್ನು ಜೆ.ಬಿ.ಐ.ಸಿ. ನೆರವಿನ ಕೆ.ಎಸ್.ಎಫ್.ಎಂ.ಬಿ.ಸಿ. ಯೋಜನೆಯ ಮಾದರಿ 6ರ ಶಾಲಾವನ ಎಂಬ ಕಾಮಗಾರಿಯನ್ನು ಯಶಸ್ವಿಯಾಗಿ ಮತ್ತು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಿರಿಯ ಪ್ರಾಥಮಿಕ ಹಾಗೂ ಪ್ರೌಢಶಾಲಾ ಮಕ್ಕಳಲ್ಲಿ ಪರಿಸರ ಮತ್ತು ಅರಣ್ಯಗಳ ಕುರಿತು ಅರಿವು ಮೂಡಿಸುವ ಮತ್ತು ಶಾಲಾ ಮಕ್ಕಳ ಸಹಯೋಗದೊಂದಿಗೆ ಶಾಲಾವನ ನಿರ್ಮಾಣ ಮಾಡಲು ಅವಕಾಶ ನೀಡಲು ಕೋರಿರುತ್ತಾರೆ.

ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಜೆಬಿಐಸಿ ಸಂಸ್ಥೆಯು ದಿನಾಂಕ 11–01–2008ರ ಪತ್ರದಲ್ಲಿ ಒಪ್ಪಿಗೆಯನ್ನು ನೀಡಿ Children's Forest Program - Karnataka ಎಂಬ ಯೋಜನೆಯನ್ನು ಕೆ.ಎಸ್.ಎಫ್.ಎಂ.ಬಿ.ಸಿ. ಯೋಜನೆಯಲ್ಲಿ ಒಟ್ಟಾರೆ ಉಳಿತಾಯವಾಗುವ ಮೊತ್ತವನ್ನು ಉಪಯೋಗಿಸಿಕೊಂಡು 2008–09ನೇ ಸಾಲಿನಿಂದ 2010–11ನೇ ಸಾಲಿನವರೆಗೆ ರೂ.43.12 ಲಕ್ಷಗಳಲ್ಲಿ ಅನುಷ್ಠಾನಗೊಳಿಸಲು ಅನುಮತಿ ನೀಡಿದೆ. ಈ ಯೋಜನೆಯನ್ನು ದಿನಾಂಕ 02–06–2008 ರಂದು ನಡೆದ ರಾಜ್ಯ ಮಟ್ಟದ ಸಲಹಾ ಸಮಿತಿ ಸಭೆಯ ಶಿಫಾರಸ್ಸಿನೊಂದಿಗೆ ದಿನಾಂಕ 12–06–2008 ರಂದು ನಡೆದ 5ನೇ ವಿಶೇಷ ಅಧಿಕಾರಸ್ಥ ಸಮಿತಿ ಸಭೆಯಲ್ಲಿ ಈ ಯೋಜನೆಗೆ ಅರಣ್ಯೀಕರಣ ಮಾದರಿ 6ರಡಿ ಸೇರಿಸಿಕೊಂಡು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಿದೆ.

ಈ ಯೋಜನೆಯ ವೆಚ್ಚವನ್ನು ಕೆ.ಎಸ್.ಎಫ್.ಎಂ.ಬಿ.ಸಿ.ಯೋಜನೆಯ 2406–ಅರಣ್ಯ ಮತ್ತು ವನ್ಯಜೀವಿ–01–ಅರಣ್ಯ 102–ಸಾಮಾಜಿಕ ಮತ್ತು ಕೃಷಿ ಅರಣ್ಯ–2–ಇತರೆ ಯೋಜನೆಗಳು–81–ಸುಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿ ವೈವಿಧ್ಯ ಸಂರಕ್ಷಣೆ 139–ಪ್ರಧಾನ ಕಾಮಗಾರಿಗಳಡಿ ಭರಿಸಲು ಮತ್ತು ಶಾಲಾ ಮಕ್ಕಳಿಗೆ ಅರಿವು ಉಂಟು ಮಾಡಲು ಮತ್ತು ಶಾಲಾ ಅರಣ್ಯ ನಿರ್ಮಾಣ ಕಾರ್ಯಕ್ರಮವನ್ನು ಕೆ.ಎಸ್.ಎಫ್.ಎಂ.ಬಿ.ಸಿ. ಯೋಜನೆಯ ಮಾದರಿ 6 ರಡಿಯಲ್ಲಿ ಸೇರಿಸಿಕೊಂಡು 2008–09ರಿಂದ 2010–11ನೇ ಸಾಲಿನವರೆಗೆ ಒಟ್ಟು ರೂ.43.12 ಲಕ್ಷಗಳ ವೆಚ್ಚದಲ್ಲಿ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ರಾಮನಗರ ಮತ್ತು ಮೈಸೂರು ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಒಟ್ಟು 200 ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಅನುಷ್ಠಾನಗೊಳಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, OISCA-International South India Chapter ಸಂಸ್ಥೆಯಿಂದ Children's Forest Program - Karnataka ಎಂಬ ಯೋಜನೆಯನ್ನು ಶಾಲಾ ಮಕ್ಕಳಿಗೆ ಅರಿವು ಉಂಟು ಮಾಡಲು ಮತ್ತು ಶಾಲಾ ಅರಣ್ಯ ನಿರ್ಮಾಣ ಕಾರ್ಯಕ್ರಮವನ್ನು ಕೆ.ಎಸ್.ಎಫ್.ಎಂ.ಬಿ.ಸಿ. ಯೋಜನೆಯ ಮಾದರಿ 6 ರಡಿಯಲ್ಲಿ ಸೇರಿಸಿಕೊಂಡು 2008–09 ರಿಂದ 2010–11ನೇ ಸಾಲಿನವರೆಗೆ ಒಟ್ಟು ರೂ.43.12 ಲಕ್ಷಗಳ ವೆಚ್ಚದಲ್ಲಿ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ರಾಮನಗರ ಮತ್ತು ಮೈಸೂರು ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಒಟ್ಟು 200 ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಅನುಷ್ಠಾನಗೊಳಿಸಲು ಮತ್ತು ಸದರಿ ವೆಚ್ಚವನ್ನು ಕೆ.ಎಸ್.ಎಫ್.ಎಂ.ಬಿ.ಸಿ.ಯೋಜನೆಯ 2406–ಅರಣ್ಯ ಮತ್ತು ವನ್ಯಜೀವಿ–01–ಅರಣ್ಯ 102–ಸಾಮಾಜಿಕ ಮತ್ತು ಕೃಷಿ ಅರಣ್ಯ–2–ಇತರೆ ಯೋಜನೆಗಳು–81–ಸುಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿ ವೈವಿಧ್ಯ ಸಂರಕ್ಷಣೆ 139–ಪ್ರಧಾನ ಕಾಮಗಾರಿಗಳಡಿ ಭರಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವ ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 128 ಎಫ್‌ಎಪಿ 2008, ಬೆಂಗಳೂರು ದಿನಾಂಕ: 19ನೇ ಆಗಸ್ಟ್ 2008**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, OISCA-International South India Chapter ಸಂಸ್ಥೆಯಿಂದ Children's Forest Program - Karnataka ಎಂಬ ಯೋಜನೆಯನ್ನು ಶಾಲಾ ಮಕ್ಕಳಿಗೆ ಅರಿವು ಉಂಟು ಮಾಡಲು ಮತ್ತು ಶಾಲಾ ಅರಣ್ಯ ನಿರ್ಮಾಣ ಕಾರ್ಯಕ್ರಮವನ್ನು ಕೆ.ಎಸ್.ಎಫ್.ಎಂ.ಬಿ.ಸಿ. ಯೋಜನೆಯ ಮಾದರಿ 6 ರಡಿಯಲ್ಲಿ ಸೇರಿಸಿಕೊಂಡು 2008–09 ರಿಂದ 2010–11ನೇ ಸಾಲಿನವರೆಗೆ ಒಟ್ಟು ರೂ.43.12 (ನಲವತ್ಮೂರು ಲಕ್ಷದ ಹನ್ನೆರಡು ಸಾವಿರ ರೂಪಾಯಿಗಳು ಮಾತ್ರ) ಲಕ್ಷಗಳ ವೆಚ್ಚದಲ್ಲಿ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ರಾಮನಗರ ಮತ್ತು ಮೈಸೂರು ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಒಟ್ಟು 200 ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಅನುಷ್ಠಾನಗೊಳಿಸಲು ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಕೆ.ಎಸ್.ಎಫ್.ಎಂ.ಬಿ.ಸಿ.ಯೋಜನೆಯ 2406–ಅರಣ್ಯ ಮತ್ತು ವನ್ಯಜೀವಿ–01–ಅರಣ್ಯ 102–ಸಾಮಾಜಿಕ ಮತ್ತು ಕೃಷಿ ಅರಣ್ಯ–2–ಇತರೆ ಯೋಜನೆಗಳು–81–ಸುಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿ ವೈವಿಧ್ಯ ಸಂರಕ್ಷಣೆ 139–ಪ್ರಧಾನ ಕಾಮಗಾರಿಗಳಡಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 12–06–2008 ರಂದು ನಡೆದ 5ನೇ ವಿಶೇಷ ಅಧಿಕಾರಸ್ಥ ಸಮಿತಿ ಸಭೆಯ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1221

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಜೆ.ಎನ್. ದೇಸಾಯಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 10ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು, ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ II ಸಂ: ಲಾ 161 ಪಿಪಿಇ 86 , ದಿನಾಂಕ: 24.07.1989.
2. ಸರ್ಕಾರದ ಪತ್ರದ ಸಂ: ಲಾ 81 ಪಿಪಿಇ 91, ದಿನಾಂಕ: 13.11.91.

3. ಸದರಿ ಅಧಿಕಾರಿಯವರ ಮನವಿ ದಿನಾಂಕ: 29.01.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ:ಡಿಪಿಎನ್/ಲೆಕ್ಕ–1/377/2007–08, ದಿನಾಂಕ: 11.03.2008

**ಪ್ರಸ್ತಾವನೆ:**

ಶ್ರೀ ಜೆ.ಎನ್. ದೇಸಾಯಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 10ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 24.07.1989, ಕ್ರ.ಸಂ:16ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 07.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 24.04.55 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 13.11.91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 24.04.1955 ಆಗಿದ್ದು, ಅವರು ದಿನಾಂಕ: 07.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 34 ವರ್ಷಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾಳಿಯ ನಿಯಮ 247(ಎ)(1)ರನ್ವಯ 30 ವರ್ಷಕ್ಕೆ ಮೇಲ್ಪಟ್ಟು ಸರ್ಕಾರಿ ಕೆಲಸಕ್ಕೆ ಸೇರಿರುವ 4ವರ್ಷಗಳ ಅವಧಿಯನ್ನು ನಿವೃತ್ತಿ ವೇತನಕ್ಕೆ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಪರಿಗಣಿಸಬೇಕೆಂದು ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಜೆ.ಎನ್. ದೇಸಾಯಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 10ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು, ಇವರು ದಿನಾಂಕ: 07.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಇವರ ಜನ್ಮ ದಿನಾಂಕ: 24.04.1955 ಆಗಿರುತ್ತದೆ. ಸದರಿ ಅಧಿಕಾರಿಯು 34 ವರ್ಷ 3 ತಿಂಗಳು 13ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1) ಪ್ರಕಾರ ನಿವೃತ್ತಿ ವೇತನಕ್ಕೆ ನಾಲ್ಕು ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡಿರುತ್ತಾರೆ ಹಾಗೂ ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 135 ಪಿಪಿಇ 2008, ಬೆಂಗಳೂರು, ದಿನಾಂಕ : 11ನೇ ಜುಲೈ 2008.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಜೆ.ಎನ್. ದೇಸಾಯಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕೆ.ಸಿ.ಎಸ್.ಆರ್ಸ್ ನಿಯಮಾವಳಿಯ ನಿಯಮ 247(ಎ)(1) ರೀತ್ಯ ಗರಿಷ್ಠ ಮಿತಿ 4(ನಾಲ್ಕು) ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಅನುಮತಿಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 570 ವೆಚ್ಚ–7/2008, ದಿನಾಂಕ 11.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಕೆ.ಸಿ. ಸಿದ್ದಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಆರ್.ಆರ್. ಕುಲಕರ್ಣಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಂಗಳೂರು ನಗರ ವಿಭಾಗ, ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ-II ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.
2. ಸರ್ಕಾರದ ಪತ್ರದ ಸಂ: ಲಾ 281 ಪಿಪಿಇ 90, ದಿನಾಂಕ: 13.03.1991
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 22.11.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ-1/276/2007-08, ದಿನಾಂಕ: 05.01.2008.

**ಪ್ರಸ್ತಾವನೆ:**

ಶ್ರೀ ಆರ್.ಆರ್. ಕುಲಕರ್ಣಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಂಗಳೂರು ನಗರ ವಿಭಾಗ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 24.07.1989, ಕ್ರ.ಸಂ:42ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 12.06.1952 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 13.03.1991ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ: 12.06.1952 ಆಗಿದ್ದು, ಅವರು ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಆದ್ದರಿಂದ ಸದರಿ ಅಧಿಕಾರಿಯು 37ವರ್ಷ 1ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ವಯಸ್ಸಿನಲ್ಲಿ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ನಾಲ್ಕು ವರ್ಷಗಳನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಬೇಕೆಂದು ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಆರ್.ಆರ್. ಕುಲಕರ್ಣಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಂಗಳೂರು ನಗರ ವಿಭಾಗ, ಇವರು ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ: 12.06.1952 ಆಗಿರುತ್ತದೆ. ಆದ್ದರಿಂದ ಸದರಿ ಅಧಿಕಾರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕಾಗಿ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡುತ್ತಾ, ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 17 ಪಿಪಿಇ 2008, ಬೆಂಗಳೂರು, ದಿನಾಂಕ : 05ನೇ ಜುಲೈ 2008.**

ಶ್ರೀ ಆರ್.ಆರ್. ಕುಲಕರ್ಣಿ, ಸಹಾಯಕ ಅಭಿಯೋಗ ನಿರ್ದೇಶಕು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರಿತ್ಯ ಗರಿಷ್ಠ ಮಿತಿ 4 ವರ್ಷಗಳು ಅಧಿಕವಾಗಿ ಶ್ರೀಯುತರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 576 ವೆಚ್ಚ-7/2008, ದಿನಾಂಕ 10.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಷಿಮೋಸಾ ಮತ್ತು ಅಭಿಯೋಗಗಳು)

**ಸಂಖ್ಯೆ: ಒಇ 85 ಪಿಪಿಇ 2008, ಬೆಂಗಳೂರು, ದಿನಾಂಕ 16ನೇ ಜುಲೈ 2008**

**ಅಧಿಸೂಚನೆ**

ಶ್ರೀ ಜಿ.ಜಿ. ಗುರುದೇವ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 8ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ 285(1)ರ ಅನ್ವಯ ದಿನಾಂಕ 17.07.2008ರ ಅಪರಾಹ್ನ ದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1072

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಪಿಪೋಸ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ಎ. ಹುದ್ದಾರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ದಾವಣಗೆರೆ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.
2. ಸರ್ಕಾರದ ಪತ್ರದ ಸಂ. ಲಾ 52 ಪಿಪಿಇ 91, ದಿನಾಂಕ: 12.12.91
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 31.05.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/98/2007–08, ದಿನಾಂಕ: 22.08.2007.

**ಪ್ರಸ್ತಾವನೆ:**

ಶ್ರೀ ಎಸ್.ಎ. ಹುದ್ದಾರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜ'ಕರು, ದಾವಣಗೆರೆ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 24.07.1989, ಕ್ರ.ಸಂ:20ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 03.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 20.12.1954 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 12.12.91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 20.12.1954 ಆಗಿದ್ದು, ಅವರು ದಿನಾಂಕ: 03.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು ಸರ್ಕಾರಿ ಸೇವೆಗೆ ಸೇರಿದಾಗ ಅವರಿಗೆ 34 ವರ್ಷಗಳು ಮೀರಿರುತ್ತದೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾಳಿಯ ನಿಯಮ 247(ಎ)ರ ಪ್ರಕಾರ 30 ವರ್ಷಗಳ ನಂತರ ಸರ್ಕಾರಿ ಸೇವೆಗೆ ಸೇರಿದ್ದಲ್ಲಿ, ಸರ್ಕಾರಿ ಸೇವೆಗೆ ಸೇರಿದಾಗಿನ ವಯಸ್ಸು ಹಾಗೂ 30 ವರ್ಷಗಳು ಇವುಗಳಿಗೆ ಆಗುವ ವ್ಯತ್ಯಾಸದ ಅವಧಿಯನ್ನು ಅಥವಾ ಗರಿಷ್ಠ ನಾಲ್ಕು ವರ್ಷಗಳ ಅವಧಿಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರಿಸಲು ಅವಕಾಶವಿರುವುದರಿಂದ, ಸದರಿಯವರ ಅರ್ಹತಾದಾಯಕ ಸೇವೆಗೆ 4 ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಸೇರ್ಪಡೆ ಮಾಡಲು ಆದೇಶಿಸುವಂತೆ ಕೋರಿ ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು, ಶ್ರೀ ಎಸ್.ಎ. ಹುದ್ದಾರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ದಾವಣಗೆರೆ(ಈಗ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಎಸಿಜೆಎಂ ನ್ಯಾಯಾಲಯ, ಬೆಂಗಳೂರು) ಇವರಿಗೆ ನಿಯಮಾನುಸಾರ ನಿವೃತ್ತಿ ವೇತನಕ್ಕೆ ಗರಿಷ್ಠ 4 ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡಿರುತ್ತಾರೆ ಹಾಗೂ ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 419 ಪಿಪಿಇ 2007, ಬೆಂಗಳೂರು, ದಿನಾಂಕ : 23ನೇ ಜುಲೈ 2008.**

ಶ್ರೀ ಎಸ್.ವಿ. ಹುದ್ದಾರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247ರನ್ವಯ ಗರಿಷ್ಠಮಿತಿ 4(ನಾಲ್ಕು) ವರ್ಷಗಳ ಅಧಿಕ ಅವಧಿಯನ್ನು ಶ್ರೀಯುತರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 641 ವೆಚ್ಚ–7/2008, ದಿನಾಂಕ 03.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ನಾರಾಯಣ ಎಂ. ಹೆಗಡೆ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**

1. ಸರ್ಕಾರದ ಅಧಿಸೂಚನೆ (II) ಸಂ: ಲಾ 161 ಪಿಪಿಇ 86 , ದಿನಾಂಕ: 24.07.1989.
2. ಸರ್ಕಾರದ ಪತ್ರದ ಸಂ. ಲಾ 84 ಪಿಪಿಇ 91, ದಿನಾಂಕ: 12.12.91
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 26.11.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/275/2007–08, ದಿನಾಂಕ: 07.01.2008.

**ಪ್ರಸ್ತಾವನೆ:**

ಶ್ರೀ ನಾರಾಯಣ ಎಂ. ಹೆಗಡೆ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 24.07.1989, ಕ್ರ.ಸಂ:6ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 23.06.1952 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 12.12.91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 23.06.1952 ಆಗಿದ್ದು, ಅವರು ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 37ವರ್ಷ 1ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾಳಿಯ ನಿಯಮ 247(ಎ)ರ ಪ್ರಕಾರ 30 ವರ್ಷಕ್ಕಿಂತ ಮೇಲ್ಪಟ್ಟ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದಲ್ಲಿ ಅಂತಹ ಅವಧಿಯನ್ನು ಅರ್ಹತಾದಾಯಕ ಸೇವಗೆ ಗರಿಷ್ಠ ನಾಲ್ಕು ವರ್ಷಗಳ ಮಿತಿ ಒಳಪಟ್ಟು ಹೆಚ್ಚುವರಿಯಾಗಿ ಸೇರಿಸಲು ಅವಕಾಶವಿರುವುದರಿಂದ ಅರ್ಹತಾದಾಯಕ ಸೇವೆಗೆ 4ವರ್ಷಗಳ ಸೇವೆಯನ್ನು ಸೇರ್ಪಡೆ ಮಾಡಿ ಆದೇಶ ಹೊರಡಿಸಿ, ಮಹಾಲೇಖಪಾಲರ ಕಛೇರಿಗೆ ಪ್ರತಿಯನ್ನು ಕಳುಹಿಸಿಕೊಡಬೇಕೆಂದು ಸದರಿ ಅಧಿಕಾರಿಯು ಮನವಿ ಮಾಡಿಕೊಂಡಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು, ಶ್ರೀ ನಾರಾಯಣ ಎಂ.ಹೆಗಡೆ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ, ಇವರು ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಇವರ ಜನ್ಮ ದಿನಾಂಕ: 23.06.1952 ಆಗಿರುತ್ತದೆ. ಸದರಿ ಅಧಿಕಾರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ಪ್ರಕಾರ ನಿವೃತ್ತಿ ವೇತನಕ್ಕೆ ಗರಿಷ್ಠ 4 ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡಿರುತ್ತಾರೆ ಹಾಗೂ ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 22 ಪಿಪಿಇ 2008, ಬೆಂಗಳೂರು, ದಿನಾಂಕ : 23ನೇ ಜುಲೈ 2008.**

ಶ್ರೀ ನಾರಾಯಣ ಎಂ. ಹೆಗಡೆ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ಪ್ರಕಾರ ಗರಿಷ್ಠಮಿತಿಯಾದ 4(ನಾಲ್ಕು) ವರ್ಷಗಳನ್ನು ಹೆಚ್ಚುವರಿಯಾಗಿ ಪಿಂಚಣಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 636 ವೆಚ್ಚ–7/2008, ದಿನಾಂಕ 02.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1122

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಪಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಐ. ವಿರೂಪಣ್ಣ, 1ನೇ ಅಧಿಕ ಸರ್ಕಾರಿ ಅಭಿಯೋಜಕರು, ಗುಲ್ಬರ್ಗಾ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳು ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 67ಪಿಪಿಇ 82, ದಿನಾಂಕ: 13.10.1982
2. ಸರ್ಕಾರದ ಆದೇಶ ಸಂ: ಲಾ 59 ಪಿಪಿಇ 83, ದಿನಾಂಕ: 09.06.1983
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 29.12.2007
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/311/2007–08, ದಿನಾಂಕ: 15.02.2008

**ಪ್ರಸ್ತಾವನೆ:**

ಶ್ರೀ ವಿರೂಪಣ್ಣ, 1ನೇ ಅಧಿಕ ಸರ್ಕಾರಿ ಅಭಿಯೋಜಕರು, ಗುಲ್ಬರ್ಗಾ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 13.10.1982ರ ಕ್ರ.ಸಂ: 3ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ: 21.10.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 10.04.1950 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 10.04.1950 ಆಗಿದ್ದು, ಅವರು ದಿನಾಂಕ: 21.10.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 32 ವರ್ಷ 6 ತಿಂಗಳು 11ನೇ ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, 2 ವರ್ಷಗಳನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಜ್ಯಗಳ ಇಲಾಖೆ ಇವರು ಶ್ರೀ ಐ. ವಿರೂಪಣ್ಣ, 1ನೇ ಅಧಿಕ ಸರ್ಕಾರಿ ಅಭಿಯೋಜಕರು, ಗುಲ್ಬರ್ಗಾ ಇವರು ದಿನಾಂಕ 21.10.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ 10.04.1950 ಆಗಿದ್ದು, ಇವರು 32 ವರ್ಷ, 6 ತಿಂಗಳು, 11 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ನಿಯಮದ ಪ್ರಕಾರ 2 ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 96 ಪಿಪಿಇ 2008, ಬೆಂಗಳೂರು, ದಿನಾಂಕ 30ನೇ ಜೂನ್ 2008.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಐ. ವಿರೂಪಣ್ಣ, 1ನೇ ಅಧಿಕ ಸರ್ಕಾರಿ ಅಭಿಯೋಜಕರು, ಗುಲ್ಬರ್ಗಾ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ವೇತನಕ್ಕೆ ಮಾತ್ರ ಎರಡು ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 614 ವೆಚ್ಚ–7/2008, ದಿನಾಂಕ 09.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಅಜಿತಕುಮಾರ್ ಡಿ. ಹಮಿಗಿ, ಸಹಾಯಕ ಸರ್ಕಾರಿ ಅಭಿಯೋಜಕರು, ಮೈಸೂರು, ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 225 ಪಿಪಿಇ 91, ದಿನಾಂಕ: 14.06.94
2. ಸರ್ಕಾರದ ಪತ್ರದ ಸಂ: ಲಾ 37 ಪಿಪಿಇ 97, ದಿನಾಂಕ: 07.05.1997
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 27.12.2007
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/318/2007–08, ದಿನಾಂಕ: 28.04.2008.

**ಪ್ರಸ್ತಾವನೆ:**

ಶ್ರೀ ಅಜಿತಕುಮಾರ್ ಡಿ. ಹಮಿಗಿ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. 2ನೇ ನ್ಯಾಯಾಲಯ, ಮೈಸೂರು, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 14.06.94ರ ಕ್ರ.ಸಂ: 7ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 24.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 03.05.1960 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 07.05.1997ರ ಸರ್ಕಾರದ ಪತ್ರ'ದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 03.05.1960 ಆಗಿದ್ದು, ಅವರು ದಿನಾಂಕ: 24.06.1994ರ ಬೆಳಿಗ್ಗೆ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 34 ವರ್ಷ 1 ತಿಂಗಳು 21ನೇ ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ಗರಿಷ್ಠ 4 ವರ್ಷ 1 ತಿಂಗಳು 21 ದಿನಗಳನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಅಜಿತ್‌ಕುಮಾರ್ ಡಿ.ಹಮಿಗಿ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. 2ನೇ ನ್ಯಾಯಾಲಯ, ಮೈಸೂರು, ದಿನಾಂಕ 24.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ 03.05.1960 ಆಗಿದ್ದು, ಇವರು 34 ವರ್ಷ, 1 ತಿಂಗಳು, 21 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ನಿಯಮದ ಪ್ರಕಾರ ಗರಿಷ್ಠ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 209 ಪಿಪಿಇ 2008, ಬೆಂಗಳೂರು, ದಿನಾಂಕ 30ನೇ ಜೂನ್ 2008.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಅಜಿತಕುಮಾರ್ ಡಿ. ಹಮಿಗಿ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. 2ನೇ ನ್ಯಾಯಾಲಯ, ಮೈಸೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ನಾಲ್ಕು ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 615 ವೆಚ್ಚ–7/2008, ದಿನಾಂಕ 09.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ಕೆ. ಮೂರ್ತಿರಾವ್, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 15 ಪಿಪಿಇ 83, ದಿನಾಂಕ: 27.01.1984.
2. ಸರ್ಕಾರದ ಆದೇಶದ ಸಂ: ಲಾ 96 ಪಿಪಿಇ 1984, ದಿನಾಂಕ: 06.06.1984.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 24.12.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/306/2007–08, ದಿನಾಂಕ: 24.01.2008

**ಪ್ರಸ್ತಾವನೆ:**

ಶ್ರೀ ಎಸ್.ಕೆ. ಮೂರ್ತಿರಾವ್, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 27.01.1984ರ ಕ್ರ.ಸಂ: 22ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 06.02.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 15.05.1950 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 12.07.2006ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 15.05.1950 ಆಗಿದ್ದು, ಅವರು ದಿನಾಂಕ: 06.02.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 33 ವರ್ಷ 8ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, 3ವರ್ಷ 8ತಿಂಗಳನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಆದೇಶಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಎಸ್.ಕೆ. ಮೂರ್ತಿರಾವ್, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ ಇವರು ದಿನಾಂಕ 06.02.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ: 15.05.1950 ಆಗಿರುತ್ತದೆ. ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ 3 ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 35 ಪಿಪಿಇ 2008, ಬೆಂಗಳೂರು, ದಿನಾಂಕ 30ನೇ ಜೂನ್ 2008.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಎಸ್.ಕೆ. ಮೂರ್ತಿರಾವ್, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ವೇತನಕ್ಕೆ ಮಾತ್ರ 3 ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 611 ವೆಚ್ಚ–7/2008, ದಿನಾಂಕ 12.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಕೃಷ್ಣ ಜಿ. ದೇಶಭಂಡಾರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಹಾಸನ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 56 ಪಿಪಿಇ 99, ದಿನಾಂಕ: 12.01.2000.
2. ಸರ್ಕಾರದ ಆದೇಶದ ಸಂ: ಒಇ 285 ಪಿಪಿಇ 2007, ದಿನಾಂಕ: 18.09.2007.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 06.12.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/298/2007–08, ದಿನಾಂಕ:26.12.2007.

**ಪ್ರಸ್ತಾವನೆ:**

ಶ್ರೀ ಕೃಷ್ಣ ಜಿ. ದೇಶಭಂಡಾರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಹಾಸನ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 12.01.2000ರ ಕ್ರ.ಸಂ: 16ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 21.01.2000ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 01.07.1966 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 18.09.2007ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 01.07.1966 ಆಗಿದ್ದು, ಅವರು ದಿನಾಂಕ: 21.01.2000ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 33 ವರ್ಷ 6 ತಿಂಗಳ 12 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ಸದರಿ ಸೌಲಭ್ಯಕ್ಕೆ ಪರಿಗಣಿಸುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಕೃಷ್ಣ ಜಿ. ದೇಶಭಂಡಾರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಹಾಸನ ಇವರು ದಿನಾಂಕ 21.01.2000ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ: 01.07.1966 ಆಗಿರುತ್ತದೆ. ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ 3 ವರ್ಷಗಳ ಸೇವೆಯನ್ನು ನಿವೃತ್ತ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಆದೇಶಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 604 ಪಿಪಿಇ 2007, ಬೆಂಗಳೂರು, ದಿನಾಂಕ 2ನೇ ಜುಲೈ 2008.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಕೃಷ ಜಿ. ದೇಶಭಂಡಾರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಹಾಸನ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ವೇತನಕ್ಕೆ ಮಾತ್ರ 3 ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 230 ವೆಚ್ಚ–7/2008, ದಿನಾಂಕ 17.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಷಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 15 ಪಿಪಿಇ 83, ದಿನಾಂಕ: 05.04.1984.
2. ಸರ್ಕಾರದ ಆದೇಶದ ಸಂ: ಲಾ 142 ಪಿಪಿಇ 84, ದಿನಾಂಕ: 16.08.84.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 07.03.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/363/2007–08, ದಿನಾಂಕ:08.04.2008.

**ಪ್ರಸ್ತಾವನೆ:**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 05.04.1984ರ ಕ್ರ.ಸಂ: 6ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 18.04.1984ರ ಅಪರಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 15.04.1951 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 16.08.1984ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 15.04.1951 ಆಗಿದ್ದು, ಅವರು ದಿನಾಂಕ: 18.04.1984ರ ಅಪರಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ಸದರಿ ಸೌಲಭ್ಯಕ್ಕೆ ಪರಿಗಣಿಸುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ ಇವರು ದಿನಾಂಕ 18.04.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ: 15.04.1951 ಆಗಿರುತ್ತದೆ. ಇವರು 33 ವರ್ಷ 03 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವಗೆ ಸೇರಿದ್ದು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ 3 ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಶಿಫಾರಸ್ಸು ಮಾಡುತ್ತಾ, ಈ ಬಗ್ಗೆ ಆದೇಶಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 183 ಪಿಪಿಇ 2008, ಬೆಂಗಳೂರು, ದಿನಾಂಕ 1ನೇ ಜುಲೈ 2008.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ವೇತನಕ್ಕೆ ಮಾತ್ರ 3 ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 573 ವೆಚ್ಚ–7/2008, ದಿನಾಂಕ 16.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಷಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಂ.ಆರ್. ರಾಥೋಡ್, ಸರ್ಕಾರಿ ಅಭಿಯೋಜಕರು, 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಶಿವಮೊಗ್ಗ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 198 ಪಿಪಿಇ 89, ದಿನಾಂಕ: 14/16.01.1991
2. ಸರ್ಕಾರದ ಪತ್ರದ ಸಂ: ಲಾ 164 ಪಿಪಿಇ 93, ದಿನಾಂಕ: 21.08.93.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 28.12.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ ಲೆಕ್ಕ–1/319/2007–08, ದಿನಾಂಕ: 26.02.2008.

**ಪ್ರಸ್ತಾವನೆ:**

ಶ್ರೀ ಎಂ.ಆರ್. ರಾಥೋಡ್, ಸರ್ಕಾರಿ ಅಭಿಯೋಜಕರು, 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಶಿವಮೊಗ್ಗ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 14/16.01.1991ರ ಕ್ರ.ಸಂ:13ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 24.01.1991ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 20.06.1953 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 21.08.93ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 20.06.1953 ಆಗಿದ್ದು, ಅವರು ದಿನಾಂಕ: 24.01.1991ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆಂದು, ಹಾಗಾಗಿ 37 ವರ್ಷ 07 ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇವಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ನಿವೃತ್ತಿ ಸೌಲಭ್ಯಕ್ಕೆ 4 ವರ್ಷಗಳ ಹೆಚ್ಚುವರಿ ಅರ್ಹತಾದಾಯಕ ಸೇವೆಗೆ ಆದೇಶಿಸಬೇಕೆಂದು ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಎಂ.ಆರ್. ರಾಥೋಡ್, ಸರ್ಕಾರಿ ಅಭಿಯೋಜಕರು, 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಶಿವಮೊಗ್ಗ ಇವರು ದಿನಾಂಕ: 24.01.1991ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ: 20.06.1953 ಆಗಿರುತ್ತದೆ. ಇವರು 37 ವರ್ಷ 07 ತಿಂಗಳು 04 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವಗೆ ಸೇರಿದ್ದು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಗರಿಷ್ಠ 4 ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆಗೆ ಶಿಫಾರಸ್ಸನ್ನು ಮಾಡುತ್ತಾ, ಈ ಬಗ್ಗೆ ಆದೇಶಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 128 ಪಿಪಿಇ 2008, ಬೆಂಗಳೂರು, ದಿನಾಂಕ 1ನೇ ಜುಲೈ 2008.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಎಂ.ಆರ್. ರಾಥೋಡ್, ಸರ್ಕಾರಿ ಅಭಿಯೋಜಕರು, 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಶಿವಮೊಗ್ಗ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ಮಿತಿ 4 ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 613 ವೆಚ್ಚ–7/2008, ದಿನಾಂಕ 09.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಲ್.ಜೆ. ಕೋಳೇಕರ್, ಸಹಾಯಕ ಅಭಿಯೋಗ ನಿರ್ದೇಶಕರು ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಳಗಾವಿ, ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳು ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 161ಪಿಪಿಇ 86, ದಿನಾಂಕ: 24.07.1989.
2. ಸರ್ಕಾರದ ಪತ್ರ ಸಂ: ಲಾ 268 ಪಿಪಿಇ 90, ದಿನಾಂಕ: 12.03.91
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 17.12.2007
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/349/2007–08, ದಿನಾಂಕ: 20.02.2008

**ಪ್ರಸ್ತಾವನೆ:**

ಶ್ರೀ ಎಲ್.ಜೆ. ಕೋಳೇಕರ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಳಗಾವಿ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 24.07.1989ರ ಕ್ರ.ಸಂ: 47ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ: 05.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 05.03.1953 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 05.03.1953 ಆಗಿದ್ದು, ಅವರು ದಿನಾಂಕ: 05.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 36 ವರ್ಷ 5 ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುತ್ತದೆ. ಆದ್ದರಿಂದ 6 ವರ್ಷಗಳನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ. ಸರ್ಕಾರದ ಆದೇಶ ಸಂ: ಎಫ್‌ಡಿ 1 ಎಸ್‌ಆರ್‌ಎ 2004, ದಿನಾಂಕ 04.11.2004ರಿಂದ ಜಾರಿಗೆ ಬರುವಂತೆ ಗರಿಷ್ಠ 08 ವರ್ಷಗಳೆಂದು ಇದ್ದದು 04 ವರ್ಷಗಳೆಂದು ಬದಲಾಗಿರುತ್ತದೆ, ಆದರೆ ಸದರಿ ಅಧಿಕಾರಿಯು ಬದಲಾವಣೆಯು ಜಾರಿಯಲ್ಲಿ ಬಂದ ದಿನಾಂಕ 09.11.2004ಕ್ಕಿಂತ ಮೊದಲೇ ದಿನಾಂಕ: 05.08.1989ರಂದು ಸರ್ಕಾರಿ ಸೇವೆಗೆ ಸೇರಿರುವುದರಿಂದ 6 ವರ್ಷಗಳನ್ನು ಸೇವೆಗೆ ಸೇರ್ಪಡೆ ಮಾಡಲು ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಎಲ್.ಜೆ. ಕೋಳೇಕರ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಳಗಾವಿ, ಇವರು ದಿನಾಂಕ 05.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ 05.03.1953 ಆಗಿದ್ದು, ಇವರು 36 ವರ್ಷ, 5 ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ನಿಯಮದ ಪ್ರಕಾರ ಗರಿಷ್ಠ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 104 ಪಿಪಿಇ 2008, ಬೆಂಗಳೂರು, ದಿನಾಂಕ 30ನೇ ಜೂನ್ 2008.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಎಲ್.ಜೆ. ಕೋಳೇಕರ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಳಗಾವಿ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ನಾಲ್ಕು ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 610 ವೆಚ್ಚ–7/2008, ದಿನಾಂಕ 07.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಷಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಸಿ.ಎಂ. ಬೆಳಲದವರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ನವಲಗುಂದ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 225 ಪಿಪಿಇ 91, ದಿನಾಂಕ: 14.06.94
2. ಸರ್ಕಾರದ ಆದೇಶದ ಸಂ: ಒಇ 573 ಪಿಪಿಇ 2005, ದಿನಾಂಕ: 12.07.2006
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 13.02.2008
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/395/2007–08, ದಿನಾಂಕ: 03.04.2008

**ಪ್ರಸ್ತಾವನೆ:**

ಶ್ರೀ ಸಿ.ಎಂ. ಬೆಳಲದವರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ನವಲಗುಂದ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 14.06.94ರ ಕ್ರ.ಸಂ: 37ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 24.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 16.04.59 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 12.07.2006ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 16.04.1959 ಆಗಿದ್ದು, ಅವರು ದಿನಾಂಕ: 24.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 35 ವರ್ಷ 2 ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, 5 ವರ್ಷ 2 ತಿಂಗಳನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಸಿ.ಎಂ. ಬೆಳಲದವರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ನವಲಗುಂದ ದಿನಾಂಕ 24.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ 16.04.1959 ಆಗಿದ್ದು, ಇವರು 35 ವರ್ಷ 2 ತಿಂಗಳು 8 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಗರಿಷ್ಠ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 181 ಪಿಪಿಇ 2008, ಬೆಂಗಳೂರು, ದಿನಾಂಕ 30ನೇ ಜೂನ್ 2008.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಸಿ.ಎಂ. ಬೆಳಲದವರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ನವಲಗುಂದ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ನಾಲ್ಕು ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 574 ವೆಚ್ಚ–7/2008, ದಿನಾಂಕ 09.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1024

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ಆರ್. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಬಾಗಲಕೋಟೆ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 161 ಪಿಪಿಇ 86, ದಿನಾಂಕ:24.07.1989.
2. ಸರ್ಕಾರದ ಪತ್ರದ ಸಂ. ಲಾ 267 ಪಿಪಿಇ 90, ದಿನಾಂಕ: 12.03.91
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/47/2008–09, ದಿನಾಂಕ: 04.06.2008.

**ಪ್ರಸ್ತಾವನೆ:**

ಶ್ರೀ ಎಸ್.ಆರ್. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಬಾಗಲಕೋಟೆ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 24.07.1989, ಕ್ರ.ಸಂ:17ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ:04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 27.05.1955 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 12.03.91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು, ಶ್ರೀ ಎಸ್.ಆರ್. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಬಾಗಲಕೋಟೆ, ಇವರು ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಸದರಿಯವರ ಜನ್ಮ ದಿನಾಂಕವು 27.05.1955 ಆಗಿರುತ್ತದೆ. ಆದ್ದರಿಂದ ಸದರಿಯವರು 34 ವರ್ಷ 02 ತಿಂಗಳು 07 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರನ್ವಯ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ಮಿತಿಯಾದ 4 ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆಗೆ ಸದರಿ ಅಧಿಕಾರಿಯ ಮನವಿ ಮೇರೆಗೆ ಶಿಫಾರಸ್ಸನ್ನು ಮಾಡಿರುತ್ತಾರೆ ಹಾಗೂ ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 258 ಪಿಪಿಇ 2008, ಬೆಂಗಳೂರು, ದಿನಾಂಕ: 8ನೇ ಆಗಸ್ಟ್ 2008.**

ಶ್ರೀ ಎಸ್.ಆರ್. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಶ್ರೀಯುತರಿಗೆ ಗರಿಷ್ಠ ಮಿತಿ 4(ನಾಲ್ಕು) ವರ್ಷಗಳ ಅಧಿಕ ಅವಧಿಯನ್ನು ಅವರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 795 ವೆಚ್ಚ–7/2008, ದಿನಾಂಕ 16.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1172

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಚಿನ್ನವೆಂಕಟರವಣಪ್ಪ, ಸಹಾಯಕ ಅಭಿಯೋಗ ನಿರ್ದೇಶಕರು, ಜಿಲ್ಲಾ ಪೊಲೀಸ್ ಕಛೇರಿ ಆವರಣ, ಕೋಲಾರ, ಇವರ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಲಾ 97 ಪಿಪಿಇ 97, ದಿನಾಂಕ:29.01.1998.

2. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಕೇಂಸ/ವಿವ/19/2000–01, ದಿನಾಂಕ:27.09.2007.

**ಸರ್ಕಾರದ ಆದೇಶ ಸಂಖ್ಯೆ: ಒಇ 494 ಪಿಪಿಇ 2007, ಬೆಂಗಳೂರು, ದಿನಾಂಕ: 29ನೇ ಜುಲೈ 2008.**

ಮೇಲೆ ಓದಲಾದ (1)ರಲ್ಲಿ ಸರ್ಕಾರದ ಅಧಿಸೂಚನೆಯ ಕ್ರ.ಸಂ:61ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡ ಶ್ರೀ ಚಿನ್ನವೆಂಕಟವರಣಪ್ಪ, ಸಹಾಯಕ ಅಭಿಯೋಗ ನಿರ್ದೇಶಕರು, ಜಿಲ್ಲಾ ಪೊಲೀಸ್ ಕಛೇರಿ ಆವರಣ, ಕೋಲಾರ, ಇವರು ದಿನಾಂಕ: 06.12.1998ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ಎಸ್.ಎಸ್.ಎಲ್.ಸಿ ಮೂಲ ಅಂಕಪಟ್ಟಿ (ದ್ವಿತೀಯ ಪ್ರತಿ)ಯಲ್ಲಿ ಇವರ ಜನ್ಮ ದಿನಾಂಕವನ್ನು 01.06.67 ಎಂದು ನಮೂಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ)(ತಿದ್ದುಪಡಿ) ಕಾಯ್ದೆ 1982ರ ಕಲಂ3ರ ಉಪಕಲಂ–2ರ ಅನ್ವಯ ಶ್ರೀ ಚಿನ್ನವೆಂಕಟವರಣಪ್ಪ, ಇವರ **ಜನ್ಮ ದಿನಾಂಕ: 01.06.67 (ಒಂದು – ಜೂನ್ – ಸಾವಿರದೊಂಬೈನೂರ ಆರವತ್ತೇಳು)** ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಪಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಆರ್.ಎಂ. ಗಂಜಿಗಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗಂಗಾವತಿ, ಇವರ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಲಾ 193 ಪಿಪಿಇ 2003, ದಿನಾಂಕ: 06.05.2004.

2. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಕೇಂಸ/ವಿವ/60 /2007–08, ದಿನಾಂಕ: 26.03.2008.

**ಸರ್ಕಾರದ ಆದೇಶ ಸಂಖ್ಯೆ: ಒಇ 155 ಪಿಪಿಇ 2008, ಬೆಂಗಳೂರು, ದಿನಾಂಕ: 29ನೇ ಜುಲೈ 2008.**

ಶ್ರೀ ಆರ್.ಎಂ. ಗಂಜಿಗಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗಂಗಾವತಿ, ಇವರು ಮೇಲೆ ಓದಲಾದ (1) ಸರ್ಕಾರದ ಅಧಿಸೂಚನೆ ದಿನಾಂಕ: 06.05.2004ರ ಕ್ರ.ಸಂ:2ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ: 17.05.2004ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕವನ್ನು ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್.ಎಸ್.ಎಲ್.ಸಿ ಮೂಲ ಅಂಕಪಟ್ಟಿಯಲ್ಲಿ 20.08.62 ಎಂದು ನಮೂದಿಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋ ನಿರ್ಧಾರ) (ತಿದ್ದುಪಡಿ) ಕಾಯ್ದೆ 1982ರ ಕಲಂ 3ರ ಉಪಕಲಂ–2ರ ಅನ್ವಯ ಶ್ರೀ ಆರ್.ಎಂ. ಗಂಜಿಗಟ್ಟಿ ಇವರ **ಜನ್ಮ ದಿನಾಂಕ: 20.08.62 (ಇಪ್ಪತ್ತು – ಆಗಸ್ಟ್ – ಸಾವಿರದೊಂಬೈನೂರ ಆರವತ್ತೆರಡು)** ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಪಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಂ.ಎಸ್. ಟಂಕಸಾಲಿ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಬೈಲಹೊಂಗಲ, ಇವರ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಲಾ 56 ಪಿಪಿಇ 99, ದಿನಾಂಕ:12.01.2000.

2. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ ಕೇಂಸ/ವಿವ/61(ಎ)/2001–02, ದಿನಾಂಕ: 30/31.05.2007.

**ಸರ್ಕಾರದ ಆದೇಶ ಸಂಖ್ಯೆ: ಒಇ 283 ಪಿಪಿಇ 2007, ಬೆಂಗಳೂರು, ದಿನಾಂಕ: 29ನೇ ಜುಲೈ 2008.**

ಮೇಲೆ ಓದಲಾದ (1)ರಲ್ಲಿ ಸರ್ಕಾರದ ಅಧಿಸೂಚನೆಯ ಕ್ರ.ಸಂ:8ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡ ಶ್ರೀ ಎಂ.ಎಸ್. ಟಂಕಸಾಲಿ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಬೈಲಹೊಂಗಲ, ಇವರು ದಿನಾಂಕ: 21.01.2000ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ಎಸ್.ಎಸ್.ಎಲ್.ಸಿ ಮೂಲ ಅಂಕಪಟ್ಟಿಯಲ್ಲಿ ಇವರ ಜನ್ಮ ದಿನಾಂಕವನ್ನು 01.06.59 ಎಂದು ನಮೂಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ)(ತಿದ್ದುಪಡಿ) ಕಾಯ್ದೆ 1982ರ ಕಲಂ3ರ ಉಪಕಲಂ–2ರ ಅನ್ವಯ ಶ್ರೀ ಎಂ.ಎಸ್. ಟಂಕಸಾಲಿ, ಇವರ **ಜನ್ಮ ದಿನಾಂಕ: 01.06.59 (ಒಂದು – ಜೂನ್ – ಸಾವಿರದೊಂಬೈನೂರ ಐವತ್ತೊಂಬತ್ತು)** ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ನಾರಾಯಣ ಸೇರಿಗಾರ್ ಯು. ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಕ್ಕಮಗಳೂರು, ಇವರ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಲಾ 193 ಪಿಪಿಇ 2003, ದಿನಾಂಕ: 06.05.2004.

2. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ ಕೇಂಸ/ವಿವ/61 /2007–08, ದಿನಾಂಕ: 26.03.2008.

**ಸರ್ಕಾರದ ಆದೇಶ ಸಂಖ್ಯೆ: ಒಇ 156 ಪಿಪಿಇ 2008, ಬೆಂಗಳೂರು, ದಿನಾಂಕ: 29ನೇ ಜುಲೈ 2008.**

ಶ್ರೀ ನಾರಾಯಣ ಸೇರಿಗಾರ್. ಯು. ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಕ್ಕಮಗಳೂರು, ಇವರು ಮೇಲೆ ಓದಲಾದ (1) ಸರ್ಕಾರದ ಅಧಿಸೂಚನೆ ದಿನಾಂಕ: 06.05.2004ರ ಕ್ರ.ಸಂ:4ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ: 21.05.2004ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕವನ್ನು ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್.ಎಸ್.ಎಲ್.ಸಿ ಮೂಲ ಅಂಕಪಟ್ಟಿಯಲ್ಲಿ 22.09.62 ಎಂದು ನಮೂದಿಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ)(ತಿದ್ದುಪಡಿ) ಕಾಯ್ದೆ 1982ರ ಕಲಂ 3ರ ಉಪಕಲಂ–2ರ ಅನ್ವಯ ಶ್ರೀ ನಾರಾಯಣ ಸೇರಿಗಾರ್ ಇವರ **ಜನ್ಮ ದಿನಾಂಕ: 22.09.62 (ಇಪ್ಪತ್ತೆರಡು–ಸೆಪ್ಟೆಂಬರ್–ಸಾವಿರದೊಂಬೈನೂರ ಅರವತ್ತೆರಡು)** ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1136

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಕೆ.ಜಿ. ಮುಚ್ಚಂಡಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ ಬೆಂಗಳೂರು ವಿಭಾಗ, ಬೆಂಗಳೂರು, ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ–II ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.
2. ಸರ್ಕಾರದ ಪತ್ರದ ಸಂ: ಲಾ 55 ಪಿಪಿಇ 92, ದಿನಾಂಕ: 19.03.92.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 28.01.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/375/2007–08, ದಿನಾಂಕ: 13.03.2008.

**ಪ್ರಸ್ತಾವನೆ:**

ಶ್ರೀ ಕೆ.ಜಿ. ಮುಚ್ಚಂಡಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 24.07.1989ರ ಕ್ರ.ಸಂ:55ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 07.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 24.02.1957 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 19.03.1992ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ: 24.02.1957 ಆಗಿದ್ದು, ಅವರು ದಿನಾಂಕ: 07.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಆದ್ದರಿಂದ ಸದರಿ ಅಧಿಕಾರಿಯು 33 ವರ್ಷ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ವಯಸ್ಸಿನಲ್ಲಿ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ನಿವೃತ್ತಿ ವೇತನಕ್ಕೆ ಮಾತ್ರ ನಾಲ್ಕು ವರ್ಷಗಳನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಬೇಕೆಂದು ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಕೆ.ಜಿ. ಮುಚ್ಚಂಡಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು, ಇವರು ದಿನಾಂಕ: 07.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ: 24.02.1957 ಆಗಿರುತ್ತದೆ. ಆದ್ದರಿಂದ ಸದರಿ ಅಧಿಕಾರಿಯು 32 ವರ್ಷ 05 ತಿಂಗಳು 13 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದಂತೆ ಆಗಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ ಎರಡು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕಾಗಿ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡುತ್ತಾ, ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 152 ಪಿಪಿಇ 2008, ಬೆಂಗಳೂರು, ದಿನಾಂಕ : 07ನೇ ಜುಲೈ 2008.**

ಶ್ರೀ ಕೆ.ಜಿ. ಮುಚ್ಚಂಡಿ, ಸಹಾಯಕ ಅಭಿಯೋಗ ನಿರ್ದೇಶಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರಿತ್ಯ 2 ವರ್ಷಗಳು ಅಧಿಕವಾಗಿ ಶ್ರೀಯುತರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 572 ವೆಚ್ಚ–7/2008, ದಿನಾಂಕ 09.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾವಣಗೆರೆ, ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 225 ಪಿಪಿಇ 91 , ದಿನಾಂಕ: 10.06.1994.
2. ಸರ್ಕಾರದ ಆದೇಶದ ಸಂ: ಒಇ 529 ಪಿಪಿಇ 2006, ದಿನಾಂಕ: 13.02.2007.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 08.01.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ ಲೆಕ್ಕ-1/383/2007-08, ದಿನಾಂಕ: 11.03.2008.

**ಪ್ರಸ್ತಾವನೆ:**

ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾವಣಗೆರೆ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ:10.06.1994, ಕ್ರ.ಸಂ:53ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 23.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 21.07.1962 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 13.02.2007ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 21.07.1962 ಆಗಿದ್ದು, ಅವರು ದಿನಾಂಕ: 23.06.1994ರ ಅಪರಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 32 ವರ್ಷಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗುವುದರಿಂದ, ಸರ್ಕಾರದ ಆದೇಶ ಸಂ: ಎಫ್‌ಡಿ 06 ಎಸ್‌ಆರ್‌ಎ 04, ದಿನಾಂಕ: 08.05.2006ರನ್ವಯ 30 ವರ್ಷಕ್ಕೆ ಮೇಲ್ಪಟ್ಟು ಸರ್ಕಾರಿ ಕೆಲಸಕ್ಕೆ ಸೇರಿರುವ 2ವರ್ಷಗಳ ಅವಧಿಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶವನ್ನು ಹೊರಡಿಸಿ, ಮಾನ್ಯ ಮಹಾಲೇಖಪಾಲರಿಗೆ ಸದರಿ ಮಾಹಿತಿಯನ್ನು ಒದಗಿಸಬೇಕೆಂದು ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾವಣಗೆರೆ, ಇವರು ದಿನಾಂಕ: 23.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ: 21.07.1962 ಆಗಿರುತ್ತದೆ. ಸದರಿ ಅಧಿಕಾರಿಯು 31ವರ್ಷ 11ತಿಂಗಳು 2ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ ಒಂದು ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡಿರುತ್ತಾರೆ ಮತ್ತು ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 136 ಪಿಪಿಇ 2008, ಬೆಂಗಳೂರು, ದಿನಾಂಕ : 07ನೇ ಜುಲೈ 2008**.

ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರಿತ್ಯ 1 ವರ್ಷ ಅಧಿಕವಾಗಿ ಶ್ರೀಯುತರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 571 ವೆಚ್ಚ-7/2008, ದಿನಾಂಕ 09.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ರಾಜಗೀರ ಬೀರಪ್ಪ, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಹಾಸನ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 97 ಪಿಪಿಇ 97, ದಿನಾಂಕ: 29.01.1998.
2. ಸರ್ಕಾರದ ಆದೇಶದ ಸಂ: ಒಇ 529 ಪಿಪಿಇ 2006, ದಿನಾಂಕ: 13.02.2007.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 17.01.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/367/2007–08, ದಿನಾಂಕ: 11.03.2008.

**ಪ್ರಸ್ತಾವನೆ:**

ಶ್ರೀ ರಾಜಗೀರ ಬೀರಪ್ಪ, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಹಾಸನ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 29.01.1998, ಕ್ರ.ಸಂ:38ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 06.02.98ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 18.07.1963 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 13.02.2007ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ: 18.07.1963 ಆಗಿದ್ದು, ಅವರು ದಿನಾಂಕ: 06.02.98ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆಂದು, ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ನಿವೃತ್ತಿ ಸೌಲಭ್ಯಕ್ಕೆ ಲಭ್ಯ ಹೆಚ್ಚುವರಿ ಅರ್ಹತಾದಾಯಕ ಸೇವೆಗೆ ಪರಿಗಣಿಸಬೇಕೆಂದು ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ರಾಜಗೀರ ಬೀರಪ್ಪ, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಹಾಸನ ಇವರು ದಿನಾಂಕ: 06.02.1998ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ: 18.07.1963 ಆಗಿರುತ್ತದೆ. ಇವರು 34 ವರ್ಷ 06 ತಿಂಗಳು 18 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವಗೆ ಸೇರಿದ್ದು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಗರಿಷ್ಠ 4 ವರ್ಷಗಳ ಸೇವೆಯನ್ನು ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡುತ್ತಾ, ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 132 ಪಿಪಿಇ 2008, ಬೆಂಗಳೂರು, ದಿನಾಂಕ 07ನೇ ಜುಲೈ 2008.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ರಾಜಗೀರ ಬೀರಪ್ಪ, ಸಹಾಯಕ ಅಭಿಯೋಗ ನಿರ್ದೇಶಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರಿತ್ಯ 4 ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 612 ವೆಚ್ಚ–7/2008, ದಿನಾಂಕ 12.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಪಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ವಿ.ಜಿ. ಯಳಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಶಿಕಾರಿಪುರ, ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 225 ಪಿಪಿಇ 91 , ದಿನಾಂಕ: 10.06.1994.
2. ಸರ್ಕಾರದ ಪತ್ರದ ಸಂ: ಲಾ 221 ಪಿಪಿಇ 96(17), ದಿನಾಂಕ: 18.11.1996.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 12.12.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/378/2007–08, ದಿನಾಂಕ: 08.04.2008.

**ಪ್ರಸ್ತಾವನೆ:**

ಶ್ರೀ ವಿ.ಜಿ. ಯಳಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಶಿಕಾರಿಪುರ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ:10.06.1994, ಕ್ರ.ಸಂ:20ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 24.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 01.06.1960 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 18.11.1996ರ ಸರ್ಕಾರದ ಪತ್ರ'ದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 01.06.1960 ಆಗಿದ್ದು, ಅವರು ದಿನಾಂಕ: 24.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯು 34 ವರ್ಷಗಳ ವಯಸ್ಸಿನ ನಂತರ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷಕ್ಕೆ ಮೇಲ್ಪಟ್ಟ ವಯಸ್ಸಿನಲ್ಲಿ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ನಾಲ್ಕು ವರ್ಷಗಳನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಬೇಕೆಂದು ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ವಿ.ಜಿ.ಯಳಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ. ಶಿಕಾರಿಪುರ, ಇವರು ದಿನಾಂಕ: 24.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ: 01.06.1960 ಆಗಿರುತ್ತದೆ. ಸದರಿ ಅಧಿಕಾರಿಯು 34 ವರ್ಷ 23 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡಿರುತ್ತಾರೆ ಮತ್ತು ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 182 ಪಿಪಿಇ 2008, ಬೆಂಗಳೂರು, ದಿನಾಂಕ : 07ನೇ ಜುಲೈ 2008.**

ಶ್ರೀ ವಿ.ಜಿ. ಯಳಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರಿತ್ಯ ಗರಿಷ್ಠ ಮಿತಿ 4 ವರ್ಷಗಳು ಅಧಿಕವಾಗಿ ಶ್ರೀಯುತರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 581 ವೆಚ್ಚ–7/2008, ದಿನಾಂಕ 09.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಂ.ಬಿ. ಗುಂಡವಾಡೆ, ಕಾನೂನು ಸಲಹೆಗಾರರು ಮತ್ತು ಸರ್ಕಾರಿ ಅಭಿಯೋಜಕರು, ಸಿಒಡಿ ಕಛೇರಿ, ಬೆಂಗಳೂರು ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 229 ಪಿಪಿಇ 81, ದಿನಾಂಕ: 24.02.1982.
2. ಸರ್ಕಾರದ ಆದೇಶದ ಸಂ: ಲಾ 82 ಪಿಪಿಇ 83, ದಿನಾಂಕ: 24/27.06.1983.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 23.10.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/241/2007–08, ದಿನಾಂಕ: 09.01.2008.

**ಪ್ರಸ್ತಾವನೆ:**

ಶ್ರೀ ಎಂ.ಬಿ. ಗುಂಡವಾಡೆ, ಕಾನೂನು ಸಲಹೆಗಾರರು ಮತ್ತು ಸರ್ಕಾರಿ ಅಭಿಯೋಜಕರು, ಸಿಒಡಿ ಕಛೇರಿ, ಬೆಂಗಳೂರು ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 24.02.1982, ಕ್ರ.ಸಂ:30ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 05.03.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 01.02.1950 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 24/27.06.1983ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ: 01.02.1950 ಆಗಿದ್ದು, ಅವರು ದಿನಾಂಕ: 05.03.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆಂದು, ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ನಿವೃತ್ತಿ ಸೌಲಭ್ಯಕ್ಕೆ 2 ವರ್ಷಗಳನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಬೇಕೆಂದು ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಎಂ.ಬಿ. ಗುಂಡವಾಡೆ, ಕಾನೂನು ಸಲಹೆಗಾರರು ಮತ್ತು ಸರ್ಕಾರಿ ಅಭಿಯೋಜಕರು, ಸಿಒಡಿ ಕಛೇರಿ, ಬೆಂಗಳೂರು ಇವರು ದಿನಾಂಕ: 05.03.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ: 01.02.1950 ಆಗಿರುತ್ತದೆ. ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ 2 ವರ್ಷಗಳ ಸೇವೆಯನ್ನು ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆಗೆ ಶಿಫಾರಸ್ಸನ್ನು ಮಾಡುತ್ತಾ, ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 27 ಪಿಪಿಇ 2008, ಬೆಂಗಳೂರು, ದಿನಾಂಕ 07ನೇ ಜುಲೈ 2008.**

ಶ್ರೀ ಎಂ.ಬಿ. ಗುಂಡವಾಡೆ, ಕಾನೂನು ಸಲಹೆಗಾರರು ಮತ್ತು ಸರ್ಕಾರಿ ಅಭಿಯೋಜಕರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರಿತ್ಯ 2 ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 578 ವೆಚ್ಚ–7/2008, ದಿನಾಂಕ 12.06.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ಆರ್. ಹೊಸಮತ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಬೀಳಗಿ, ಇವರ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ:ಒಇ 845 ಪಿಪಿಇ 2005, ದಿನಾಂಕ: 03.05.2006.

2. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಕೇಂಸ/ವಿವ/06 /2007–08, ದಿನಾಂಕ:06.12.2007.

**ಸರ್ಕಾರದ ಆದೇಶ ಸಂಖ್ಯೆ: ಒಇ 600 ಪಿಪಿಇ 2007(1), ಬೆಂಗಳೂರು, ದಿನಾಂಕ: 07ನೇ ಜುಲೈ 2008.**

ಶ್ರೀ ಎಸ್.ಆರ್. ಹೊಸಮತ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ(ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಬೀಳಗಿ, ಇವರು ಮೇಲೆ ಓದಲಾದ (1) ಸರ್ಕಾರದ ಅಧಿಸೂಚನೆ ದಿನಾಂಕ: 03.05.2006 ಕ್ರ.ಸಂ:5ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡಿರುತ್ತಾರೆ. ಇವರ ಜನ್ಮ ದಿನಾಂಕವನ್ನು ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್.ಎಸ್.ಎಲ್.ಸಿ ಮೂಲ ಅಂಕಪಟ್ಟಿ (ದ್ವಿತೀಯ ಪ್ರತಿ)ಯಲ್ಲಿ 02.06.1968 ಎಂದು ನಮೂದಿಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) (ತಿದ್ದುಪಡಿ) ಕಾಯ್ದೆ 1982ರ ಕಲಂ3ರ ಉಪಕಲಂ–2ರ ಅನ್ವಯ ಶ್ರೀ ಎಸ್.ಆರ್. ಹೊಸಮತ್ ಇವರ **ಜನ್ಮ ದಿನಾಂಕ: 02.06.1968 (ಎರಡನೇ ಜೂನ್ ಸಾವಿರದೊಂಭೈನೂರ ಆರವತ್ತೆಂಟು)** ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಷಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಮಹಂತಪ್ಪ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಅಧಿಕ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು, ಇವರ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಲಾ 97ಪಿಪಿಇ 97, ದಿನಾಂಕ: 29.01.1998.

2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಪಿಎನ್/ಕೇಂಸ/ವಿವ/32/2001–02, ದಿನಾಂಕ:02.05.2008.

**ಸರ್ಕಾರದ ಆದೇಶ ಸಂಖ್ಯೆ: ಒಇ 190 ಪಿಪಿಇ 2008, ಬೆಂಗಳೂರು, ದಿನಾಂಕ: 04ನೇ ಜುಲೈ 2008.**

ಮೇಲೆ ಓದಲಾದ (1) ಸರ್ಕಾರದ ಅಧಿಸೂಚನೆಯ ಕ್ರ.ಸಂ:54ರಲ್ಲಿ, ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡ ಶ್ರೀ ಮಹಂತಪ್ಪ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಅಧಿಕ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು ಇವರು ದಿನಾಂಕ: 11.02.1998ರಂದು ಸಹಾಯಕ ಸರ್ಕಾರಿ ಅಭಿಯೋಜಕ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕವು ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್.ಎಸ್.ಎಲ್.ಸಿ ಮೂಲ ಅಂಕಪಟ್ಟಿ (ದ್ವಿತೀಯ ಪ್ರತಿ)ಯಲ್ಲಿ 23.12.1959 ಎಂದು ನಮೂದಿಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ)(ತಿದ್ದುಪಡಿ) ಕಾಯ್ದೆ 1982ರ ಕಲಂ 3ರ ಉಪಕಲಂ–2ರ ಅನ್ವಯ ಶ್ರೀ ಮಹಂತಪ್ಪ ಇವರ ಜನ್ಮ **ದಿನಾಂಕ: 23.12.1959 (ಇಪ್ಪತ್ತಮೂರನೇ ಡಿಸೆಂಬರ್ ಸಾವಿರದೊಂಭೈನೂರ ಐವತ್ತೊಂಬತ್ತು)** ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಷಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಎಂ.ಎಂ. ಟ್ರಾಫಿಕ್ ನ್ಯಾಯಾಲಯ, ಬೆಂಗಳೂರು (ಅಮಾನತ್ತಿನಲ್ಲಿರುವವರು) ಇವರ ಅಮಾನತ್ತನ್ನು ರದ್ದುಪಡಿಸಿ, ಸೇವೆಗೆ ಪುನರ್ ನೇಮಿಸುವ ಕುರಿತು.

**ಓದಲಾಗಿದೆ:**
1) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ನಂ. ಡಿಪಿಎನ್ / ಸಿಶಾ–1 / 118 / 2007–08, ದಿನಾಂಕ 18.09.2007
2) ಸರ್ಕಾರದ ಆದೇಶ ನಂ. ಒಇ 446 ಪಿಪಿಇ 2007, ದಿನಾಂಕ 17.10.2007.
3) ಸರ್ಕಾರದ ಆದೇಶ ನಂ. ಒಇ 446 ಪಿಪಿಇ 2007, ದಿನಾಂಕ 20.03.2008.
4) ಶ್ರೀ ಎಸ್.ಎಸ್. ಖಾಜಿ ಇವರ ಮನವಿ ದಿನಾಂಕ 17.03.2008.
5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ನಂ. ಡಿಪಿಎನ್ / ಸಿಶಾ–1 / 118 / 2007–08, ದಿನಾಂಕ 02.04.2008
6) ತಿದ್ದುಪಡಿ ನಂ.ಒಇ 446 ಪಿಪಿಇ 2007 ದಿನಾಂಕ 23.4.2008
7) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ನಂ. ಲೋಕ್ / ಐಎನ್‌ವಿ (ಜಿ) / ಸಿಟಿ / ಕ್ರೈಂ.32 / 2007, ದಿನಾಂಕ 13.05.2008.

**ಪ್ರಸ್ತಾವನೆ:**

ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಎಂ.ಎಂ. (ಸಂಚಾರಿ) ನ್ಯಾಯಾಲಯ, ಬೆಂಗಳೂರು ಇವರು ಬೆಂಗಳೂರಿನ ಸದಾಶಿವನಗರದ ಸಂಚಾರಿ ಠಾಣೆಯ ಮೊಕದ್ದಮೆ ಕ್ರ.ಸಂ. 36/2007, ಸಿ.ಸಿ. ನಂ. 1892/07, 3ನೇ ಎಂ.ಎಂ. (ಸಂಚಾರಿ) ನ್ಯಾಯಾಲಯ, ಬೆಂಗಳೂರು ಪ್ರಕರಣದಲ್ಲಿ ಆರೋಪಿಯಾಗಿರುವ ಶ್ರೀಮತಿ ನೀತಾ ಪರಶುರಾಮ ಇವರಿಂದ ಪ್ರಕರಣವನ್ನು ಮುಗಿಸಿಕೊಡಲು ದಿನಾಂಕ 17.09.2007 ರಂದು ರೂ.2000/– (ಎರಡು ಸಾವಿರ) ಲಂಚದ ಹಣ ಪಡೆಯುತ್ತಿದ್ದಾಗ ಲೋಕಾಯುಕ್ತರ ಬಲೆಗೆ ಸಿಕ್ಕಿಬಿದ್ದಿದ್ದರೆಂಬ ಆಧಾರದ ಮೇಲೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (1)ರ ದಿನಾಂಕ 18.09.2007ರ ಪತ್ರದಲ್ಲಿ ಸದರಿಯವರನ್ನು ಅಮಾನತ್ತಿನಲ್ಲಿಡುವಂತೆ ಶಿಫಾರಸ್ಸು ಮಾಡಲಾಗಿತ್ತು. ಆ ಪ್ರಕಾರ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಎ)ರ ರೀತ್ಯಾ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿ ಇರಿಸಲಾಗಿದೆ.

ಶ್ರೀ ಎಸ್.ಎಸ್. ಖಾಜಿ ಇವರ ವಿರುದ್ಧ ಕಲಂ 7, 13(1)(ಡಿ) ಸಹವಾಚ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅನುಮತಿ ನೀಡಲಾಗಿರುತ್ತದೆ. ಶ್ರೀ ಎಸ್.ಎಸ್. ಖಾಜಿ ಇವರು ತಮ್ಮ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ಪುನರ್ ನೇಮಕ ಮಾಡುವಂತೆ ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಶ್ರೀ ಎಸ್.ಎಸ್. ಖಾಜಿ ಇವರ ಮೇಲಿನ ಕ್ರಿಮಿನಲ್ ಪ್ರಕರಣ ಇತ್ಯರ್ಥವಾಗಲು ಸಾಕಷ್ಟು ಸಮಯ ಬೇಕಾಗಿರುವುದರಿಂದ ಹಾಗೂ ಸದರಿಯವರು ಆರು ತಿಂಗಳಿಗಿಂತ ಹೆಚ್ಚಿನ ಅವಧಿಯಿಂದ ನಿಲಂಬನೆಯಲ್ಲಿರುವುದರಿಂದ ಅವರ ಅಮಾನತ್ತನ್ನು ರದ್ದುಪಡಿಸಿ, ಪುನರ್ ನೇಮಕ ಮಾಡಬಹುದೆಂದು ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಸರ್ಕಾರವನ್ನು ಕೋರಿರುತ್ತಾರೆ.

ಈ ಪ್ರಕರಣದ ತನಿಖೆಯು ಪೂರ್ಣಗೊಂಡಿದ್ದು, ಈಗಾಗಲೇ ಆರೋಪಿತರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ದೊಷಾರೋಪಣ ಪಟ್ಟಿಯನ್ನು ಸಲ್ಲಿಸಲು ತನಿಖಾಧಿಕಾರಿಯವರಿಗೆ ಸೂಚಸಲಾಗಿದೆ ಮತ್ತು ಆರೋಪಿತರನ್ನು ಅಮಾನತ್ತಿನಿಂದ ಬಿಡುಗಡೆ ಮಾಡಿದಲ್ಲಿ, ಮರು ನೇಮಕ ಮಾಡುವಾಗ, ಈ ಪ್ರಕರಣ ನಡೆದ ಸ್ಥಳವನ್ನು ಹೊರತುಪಡಿಸಿ ಬೇರೆ ಸ್ಥಳದಲ್ಲಿ ನೇಮಕ ಮಾಡಬಹುದೆಂದು ಮೇಲೆ (7)ರಲ್ಲಿ ಓದಲಾದ ದಿನಾಂಕ 13.05.2008ರ ಪತ್ರದಲ್ಲಿ ಹೆಚ್ಚುವರಿ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಿಳಿಸಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 161 ಪಿಪಿಇ 2008, ಬೆಂಗಳೂರು, ದಿನಾಂಕ: 07ನೇ ಜುಲೈ 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು (ಅಮಾನತ್ತಿನಲ್ಲಿರುವವರು), 3ನೇ ಎಂ.ಎಂ. ಟ್ರಾಫಿಕ್ ನ್ಯಾಯಾಲಯ, ಬೆಂಗಳೂರು ಇವರ ವಿರುದ್ಧ ಮೊಕದ್ದಮೆ/ಇಲಾಖಾ ವಿಚಾರಣೆ ಬಾಕಿ ಇರಿಸಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 10ನೇ ನಿಯಮದ 5ನೇ ಉಪನಿಯಮ (ಸಿ) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಮತ್ತು

ಮುಂದಿನ ಆದೇಶದವರೆಗೆ ಇವರ ಅಮಾನತ್ತನ್ನು ರದ್ದುಪಡಿಸಿ, ಚಿಕ್ಕಬಳ್ಳಾಪುರ ಜಿಲ್ಲಾ ಪೋಲೀಸ್ ಅಧೀಕ್ಷಕರ ಕಛೇರಿಯಲ್ಲಿ ಹೊಸದಾಗಿ ಸೃಜನೆಯಾಗಿರುವ ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗೆ ವರ್ಗಾವಣೆಯ ಮೂಲಕ ಸೇವೆಗೆ ಪುನರ್ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

ಪಿ.ಆರ್. 1044

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
(ಕಾ. ಮತ್ತು ಸು, ಹಾಗೂ ಕಾಪಿಪೋಸಾ ಮತ್ತು ಅಭಿಯೋಗಗಳು)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಹಬೀಬುಲ್ಲಾ, ಕೆ.ಎ.ಎಸ್. ಅಧಿಕಾರಿ (ಪ್ರಸ್ತುತ ನಿವೃತ್ತರು) ಇವರಿಗೆ ತಹಶೀಲ್ದಾರ ವೃಂದದಲ್ಲಿ 10 ವರ್ಷಗಳ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂ:. ಸಿಆಸುಇ 03 ಎಸ್‌ಕೆಜಿ 2000, ದಿನಾಂಕ 4–3–2006.
2. ಸರ್ಕಾರದ ಆದೇಶ ಸಂ: ಎಫ್‌ಡಿ 16 ಎಸ್‌ಆರ್‌ಪಿ 2002(1), ದಿನಾಂಕ 14–6–2002.
3. ಶ್ರೀಯುತರ ಮನವಿ ದಿನಾಂಕ 7–12–2004, 15–9–2005.

**ಪ್ರಸ್ತಾವನೆ :**

ಶ್ರೀ ಹಬೀಬುಲ್ಲಾ, ಕೆ.ಎ.ಎಸ್. ಅಧಿಕಾರಿ (ಪ್ರಸ್ತುತ ನಿವೃತ್ತರು) ಇವರು ಉಲ್ಲೇಖಿತ (3)ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ, ತಾವು ದಿನಾಂಕ 1–10–1983ರಲ್ಲಿ ತಹಶಿಲ್ದಾರ್ ಹುದ್ದೆಗೆ ನೇರ ನೇಮಕಾತಿ ಹೊಂದಿದ್ದು, ಜುಲೈ 1993ರಲ್ಲಿ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ಪದೋನ್ನತಿ ಪಡೆದಿದ್ದು, ಪದೋನ್ನತಿ ನೀಡುವ ಮುನ್ನ 9 ವರ್ಷ 9 ತಿಂಗಳಲ್ಲಿ ತಹಶೀಲ್ದಾರ್ ಗ್ರೇಡ್–2 ಹುದ್ದೆಯಲ್ಲಿಯೇ ಕಾರ್ಯ ನಿರ್ವಹಿಸಿರುವುದಾಗಿ, ಇನ್ನೂ 10 ವರ್ಷಗಳ ಕಾಲಮಿತಿ ವೇತನ ಬಡ್ತಿಗೆ 3 ತಿಂಗಳು ಕಡಿಮೆ ಇದ್ದುದರಿಂದ ಮೇಲೆ ಓದಲಾದ ಉಲ್ಲೇಖಿತ (2) ದಿನಾಂಕ 14–6–2002ರ ಆದೇಶದನ್ವಯ, ಕಿರಿಯ ಹುದ್ದೆಯಲ್ಲಿಯೇ ಅಂದರೆ, ತಹಶೀಲ್ದಾರ್ ಹುದ್ದೆಯಲ್ಲಿಯೇ (Option) ಮುಂದುವರಿಯಲು ಮನವಿಯನ್ನು ದಿನಾಂಕ 27–9–2002ರಲ್ಲಿ ಸಲ್ಲಿಸಿದ್ದರಿಂದ, ತಮಗೆ ತಹಶೀಲ್ದಾರ್ ಹುದ್ದೆಯಲ್ಲಿ 10 ವರ್ಷಗಳ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಈ ಅಧಿಕಾರಿಯ ಕೋರಿಕೆಯನ್ನು ಅಧಿಕೃತ ಜ್ಞಾಪನ ಸಂ: ಎಫ್‌ಡಿ 01 ಎಸ್‌ಆರ್‌ಪಿ 85, ದಿನಾಂಕ 22–1–1985ರನ್ವಯ ಹಾಗೂ ಶ್ರೀಯುತರು ಪ್ರಸ್ತಾವನೆಯಲ್ಲಿ ಸಲ್ಲಿಸಲಾಗಿದ್ದ Option ಮನವಿಯನ್ನು ಆರ್ಥಿಕ ಇಲಾಖೆಯ ಆದೇಶದನುಗುಣವಾಗಿ ಪರಿಶೀಲಿಸಲಾಗಿರುತ್ತದೆ ಹಾಗೂ ಶ್ರೀ ಹಬೀಬುಲ್ಲಾ ಇವರ ಕಾರ್ಯ ನಿರ್ವಹಣಾ ವರದಿಗಳನ್ನು ಹಾಗೂ ಇಲಾಖಾ ವಿಚಾರಣೆ ಕುರಿತು ಮಾಹಿತಿಯನ್ನು ಪರಿಶೀಲಿಸಿದ್ದು, ಸದರಿ ಅಧಿಕಾರಿಯ ಸೇವೆಯು ತೃಪ್ತಿಕರವಾಗಿದ್ದು, ಯಾವುದೇ ಶಿಸ್ತು ಕ್ರಮ ಬಾಕಿ ಇರುವುದಿಲ್ಲವೆಂದು ಖಚಿತ ಪಡಿಸಿಕೊಂಡು ಶ್ರೀ ಹಬೀಬುಲ್ಲಾ ಇವರಿಗೆ ದಿನಾಂಕ 30–9–1993 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಕಾಲಮಿತಿ ವೇತನ ಬಡ್ತಿ) ನಿಯಮಾವಳಿಗಳು 1983ರನ್ವಯ ತಹಶೀಲ್ದಾರ್ ಹುದ್ದೆಯಲ್ಲಿ 10 ವರ್ಷಗಳ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 319 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 19ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಹಬೀಬುಲ್ಲಾ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರಿಗೆ ತಹಶೀಲ್ದಾರ್ ವೃಂದದಲ್ಲಿ ದಿನಾಂಕ 30–9–1993ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಕಾಲಮಿತಿ) ವೇತನಬಡ್ತಿ ನಿಯಮಗಳು 1983ರನ್ವಯ 10 ವರ್ಷಗಳ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡಲಾಗಿದೆ.

ಶ್ರೀ ಹಬೀಬುಲ್ಲಾ ಅವರು ಈ ಹಿಂದೆ ಕಾಲಮಿತಿ ವೇತನ ಬಡ್ತಿ ಸೌಲಭ್ಯವನ್ನು ಪಡೆದಿದ್ದಲ್ಲಿ ಅದರಿಂದ ಲಭ್ಯವಾದ ಆರ್ಥಿಕ ಸೌಲಭ್ಯವು ಈ ಆದೇಶ ಹೊರಿಡಿಸಿದ ದಿನಾಂಕದಿಂದ ತಾನಾಗಿಯೇ ರದ್ದಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1212

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)